KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೩ | ಬೆಂಗಳೂರು, ಗುರುವಾರ ಆಗಸ್ಟ್ ೨೮, ೨೦೦೮ (ಭಾದ್ರಪದ ೬, ಶಕ ವರ್ಷ ೧೯೩೦) | ಸಂಚಿಕೆ ೩೫ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಗುಲ್ಬರ್ಗಾದ ಮಹಾದೇವಪ್ಪ ರಾಂಪುರೆ ಮೆಡಿಕಲ್ ಕಾಲೇಜಿಗೆ ಮರಣೋತ್ತರ ಶವಪರೀಕ್ಷೆ ಮಾಡಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** ಪತ್ರ ಸಂಖ್ಯೆ: ವೈಶಿನಿ/ಎಂಇಎಸ್(2)04/2007-08, ದಿನಾಂಕ 30-5-2007.

**ಪ್ರಸ್ತಾವನೆ :**

ವೈದ್ಯಕೀಯ ಶಿಕ್ಷಣ ನಿರ್ದೇಶಕರು ಮೇಲೆ ಓದಲಾದ ತಮ್ಮ ಪತ್ರದಲ್ಲಿ ಗುಲ್ಬರ್ಗಾದಲ್ಲಿರುವ ಮಹಾದೇವಪ್ಪ ರಾಂಪುರೆ ಮೆಡಿಕಲ್ ಕಾಲೇಜಿನ ತಪಾಸಣೆ ನಡೆಸಿ, ಶವ ಪರೀಕ್ಷೆ ಅಧ್ಯಯನ ಮಾಡಲು ವಿದ್ಯಾರ್ಥಿಗಳಿಗೆ ಪ್ರಾಯೋಗಿಕ ತರಬೇತಿ ನೀಡಲು ಕಾಲೇಜು ಹೊಂದಿರುವ ಮೂಲಭೂತ ಸೌಕರ್ಯಗಳ ಬಗ್ಗೆ ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಮೈಸೂರು ವೈದ್ಯಕೀಯ ಕಾಲೇಜಿನ ವಿಧಿವೈದ್ಯಶಾಸ್ತ್ರ ವಿಭಾಗದ ಕ್ರಮವಾಗಿ ಪ್ರಾಧ್ಯಾಪಕರು ಮತ್ತು ವಿಭಾಗ ಮುಖ್ಯಸ್ಥರು ಮತ್ತು ಸಹಾಯಕ ಪ್ರಾಧ್ಯಾಪಕರನ್ನೊಳಗೊಂಡ ತಂಡವು ಸಲ್ಲಿಸಿರುವ ವರದಿಯನ್ನು ಸಲ್ಲಿಸುತ್ತಾ ಮೆಡಿಕೋ ಲೀಗಲ್ ಶವಪರೀಕ್ಷೆ ನಡೆಸಲು ಅನುಮತಿ ನೀಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ ಎಂ.ಆರ್. ಮೆಡಿಕಲ್ ಕಾಲೇಜು ಗುಲ್ಬರ್ಗಾ ಇದರ ವೈದ್ಯಕೀಯ ವಿದ್ಯಾರ್ಥಿಗಳ ಅಧ್ಯಯನಕ್ಕಾಗಿ ಮೆಡಿಕೋ ಲೀಗಲ್ ಶವ ಪರೀಕ್ಷೆ ನಡೆಸಲು ಅನುಮತಿ ನೀಡಲು ಸರ್ಕಾರವು ತೀರ್ಮಾನಿಸಿ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 264 ಎಂಪಿಎಸ್ 2008, ಬೆಂಗಳೂರು, ದಿನಾಂಕ: 28ನೇ ಜುಲೈ 2008.**

ಎಂ.ಆರ್. ಮೆಡಿಕಲ್ ಕಾಲೇಜು ಗುಲ್ಬರ್ಗಾ ಇದರ ವೈದ್ಯಕೀಯ ವಿದ್ಯಾರ್ಥಿಗಳ ಅಧ್ಯಯನಕ್ಕಾಗಿ ವಿಧಿವೈದ್ಯಶಾಸ್ತ್ರ ವಿಭಾಗದ ಪ್ರಾಧ್ಯಾಪಕರು ಮತ್ತು ಸಹಾಯಕ ಪ್ರಾಧ್ಯಾಪಕರು ಕಾಲೇಜು ಆಸ್ಪತ್ರೆಯಲ್ಲಿ ಮೃತರಾಗುವವರ ದೇಹಗಳ ಮರಣೋತ್ತರ ಶವ ಪರೀಕ್ಷೆಗಳನ್ನು (Medico-legal Autopsy) ಮಾತ್ರ ನಡೆಸಲು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಅನುಮತಿ ನೀಡಲಾಗಿದೆ.

1) ಶವಗಳ ಮರಣೋತ್ತರ ಪರೀಕ್ಷೆ ನಡೆಸಲು ಈಗ ಲಭ್ಯವಿರುವ ಸೌಲಭ್ಯಗಳಲ್ಲದೆ ಇನ್ನೂ ಹೆಚ್ಚಿನ ಅವಶ್ಯಕತೆ ಇದ್ದಲ್ಲಿ (ಬೋಧನಾ ಸೌಕರ್ಯಗಳ ಸಲುವಾಗಿ) ಸದರಿ ಸೌಲಭ್ಯಗಳನ್ನು ವೈದ್ಯಕೀಯ ಕಾಲೇಜು ಒದಗಿಸತಕ್ಕದ್ದು.
2) ಶವಗಳ ಮರಣೋತ್ತರ ಪರೀಕ್ಷೆಗಳನ್ನು ಜಿಲ್ಲಾ ಶಸ್ತ್ರ ಚಿಕಿತ್ಸಕರು ಅಥವಾ ನಿವಾಸಿ ವೈದ್ಯಾಧಿಕಾರಿಗಳು ಅಥವಾ ಅವರಿಂದ ನಿಯೋಜಿಸಲ್ಪಟ್ಟವರ ಸೂಚನೆಯ ಮೇರೆಗೆ ನಿರ್ವಹಿಸತಕ್ಕದ್ದು.

3) ಕಾಲಕಾಲಕ್ಕೆ ಸರ್ಕಾರವು ನಿಗಧಿಪಡಿಸಿದ ಆಸ್ಪತ್ರೆ ಕರ್ತವ್ಯದ ಅವಧಿಯಲ್ಲಿ ಆರಕ್ಷಕರಿಂದ ಪಂಚನಾಮ ನಡೆಸಲ್ಪಟ್ಟು, ಮರಣೋತ್ತರ ಪರೀಕ್ಷೆಗಳನ್ನು ನಡೆಸಲು ಕೋರಿಕೆಯು ಬಂದಲ್ಲಿ, ಎಲ್ಲಾ ಶವಗಳ ಮರಣೋತ್ತರ ಪರೀಕ್ಷೆಗಳನ್ನು ಆ ದಿನವೇ ನಿರ್ವಹಿಸತಕ್ಕದ್ದು.

4) ವಿಶೇಷ ಸಂದರ್ಭಗಳಲ್ಲಿ ಆರಕ್ಷಕರ ಲಿಖಿತ ವಿನಂತಿಯ ಮೇರಗೆ ಶವಗಳ ಮರಣೋತ್ತರ ಪರೀಕ್ಷೆಗಳನ್ನು ಆರಕ್ಷಕರು ಸೂಚಿಸಿದ ಸ್ಥಳದಲ್ಲಿಯೇ ನಿರ್ವಹಿಸತಕ್ಕದ್ದು.

5) ಮರಣೋತ್ತರ ಶವಪರೀಕ್ಷೆಯ ನಂತರ ರಾಸಾಯನಿಕ ಪರೀಕ್ಷೆಗಳಿಗಾಗಿ ಆಯ್ದ ಭಾಗಗಳನ್ನು ಆರಕ್ಷಕರು ಸೂಚಿಸಿದ ಸ್ಥಳದಲ್ಲಿಯೇ ನಿರ್ವಹಿಸತಕ್ಕದ್ದು.

6) ಮರಣ ಕಾರಣ, ಮರಣೋತ್ತರ ಪರೀಕ್ಷಾ ವರದಿಗಳನ್ನು ನಿಗಧಿತ ಸಮಯದೊಳಗೆ ತಯಾರಿಸಿ ಜಿಲ್ಲಾ ಶಸ್ತ್ರ ಚಿಕಿತ್ಸಕರು ಅಥವಾ ನಿವಾಸಿ ವೈದ್ಯಾಧಿಕಾರಿಯವರ ಮೇಲುರುಜುವಿನೊಂದಿಗೆ ಸಂಬಂಧಪಟ್ಟ ಆರಕ್ಷಕ ಠಾಣೆಗೆ ಸಲ್ಲಿಸತಕ್ಕದ್ದು.

7) ಎಂ.ಆರ್. ಮೆಡಿಕಲ್ ಕಾಲೇಜು, ಗುಲ್ಬರ್ಗಾ ಮುಚ್ಚಳಿಕೆಯಲ್ಲಿ ಬರೆದುಕೊಟ್ಟಂತೆ ಯಾವುದೇ ಆರ್ಥಿಕ ಹೊರೆಯನ್ನು ಸರ್ಕಾರದಿಂದ ಭರಿಸತಕ್ಕದ್ದು.

8) ಸಾಕ್ಷ್ಯಾಧಾರ ಒದಗಿಸುವ ಸಲುವಾಗಿ ನ್ಯಾಯಾಲಯಗಳಿಗೆ ಹಾಜರಾಗುವ ಸಂಬಂಧ ಯಾವುದೇ ಭತ್ಯೆಗಳನ್ನು ಸರ್ಕಾರ ಭರಿಸತಕ್ಕದ್ದಲ್ಲ. ಶವಗಳ ಪರೀಕ್ಷೆ ನಡೆಸಿದ ತಜ್ಞರು ಎಂ.ಆರ್. ಮೆಡಿಕಲ್ ಕಾಲೇಜಿನ ಉದ್ಯೋಗದಲ್ಲಿ ಮುಂದುವರಿಯದಿದ್ದರೂ ಸಹ ನ್ಯಾಯಾಲಯಕ್ಕೆ ಸಾಕ್ಷ್ಯಾಧಾರ ನೀಡಲು ಹಾಜರುಪಡಿಸುವ ಜವಾಬ್ದಾರಿ ಸದರಿ ವೈದ್ಯಕೀಯ ಕಾಲೇಜಿನದ್ದಾಗಿರತಕ್ಕದ್ದು.

9) ಮರಣೋತ್ತರ ಪರೀಕ್ಷೆಗಾಗಿ ಯಾವುದೇ ಶುಲ್ಕವನ್ನು ಮೃತರ ಕುಟುಂಬದವರಿಂದ ಅಥವಾ ಬಂಧುಬಾಂಧವರಿಂದ ವಸೂಲಿ ಮಾಡತಕ್ಕದ್ದಲ್ಲ.

10) ಮೆಡಿಕೋ ಲೀಗಲ್ ತಜ್ಞರ ಪ್ರಮಾಣ ಪತ್ರವನ್ನು (Expert Opinion) ಸದರಿ ಕಾಲೇಜಿನ ವಿಧಿವೈದ್ಯಶಾಸ್ತ್ರದಲ್ಲಿ ಪ್ರಾಧ್ಯಾಪಕ ಹುದ್ದೆ ಹೊಂದಿದವರು ಮಾತ್ರ ನೀಡತಕ್ಕದ್ದು.

11) ಮೆಡಿಕೋ ಲೀಗಲ್ ಪ್ರಕರಣಗಳಲ್ಲಿ ಕಾಯ್ದಿರಿಸಿದ ವಸ್ತುಗಳನ್ನು ವಿಧಿವೈದ್ಯಶಾಸ್ತ್ರ ವಿಭಾಗದ ಪ್ರಾಧ್ಯಾಪಕರು ವಿಶ್ಲೇಷಿಸಿ, ಅಭಿಪ್ರಾಯ ನೀಡುವ ಸಲುವಾಗಿ ಅಗತ್ಯವಾದ ಪ್ರಯೋಗಾಲಯವನ್ನು ಸ್ಥಾಪಿಸಿ, ಅದಕ್ಕೆ ರಾಷ್ಟ್ರೀಯ ಅಕ್ರಿಡೇಷನ್ ಮಾನ್ಯತೆಯನ್ನು ಹೊಂದತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1150

**ವಿ. ಶ್ರೀರಾಮರೆಡ್ಡಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ವೈದ್ಯಕೀಯ ಶಿಕ್ಷಣ)

## ಸಹಕಾರ ಸಚಿವಾಲಯ

**ವಿಷಯ :** ಕರ್ನಾಟಕ ಸಹಕಾರಿ ಹಾಲು ಉತ್ಪಾದಕರ ಮಹಾಮಂಡಳ ನಿಯಮಿತ, ಬೆಂಗಳೂರು ಇದರ 2007–08ನೇ ಸಾಲಿನ ಶಾಸನಬದ್ಧ ಲೆಕ್ಕಪರಿಶೋಧನೆ–ಚಾರ್ಟರ್ಡ್ ಅಕೌಂಟೆಂಟರುಗಳಿಗೆ ಲೆಕ್ಕಪರಿಶೋಧನಾ ಶುಲ್ಕ/ ಸಂಭಾವನೆ ಮಂಜೂರಾತಿ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಿಒ 171 ಸಿಎಲ್‌ಎಂ 2006, ದಿನಾಂಕ 30–8–2006.
2. ಸರ್ಕಾರದ ಆದೇಶ ಸಂಖ್ಯೆ: ಸಿಒ 94 ಸಿಎಲ್‌ಎಂ 2007, ದಿನಾಂಕ 10–5–2007.
3. ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರು ಇವರ ಪತ್ರದ ಸಂಖ್ಯೆ: ಎಡಿಎಫ್ 81/ 2006–2007, ದಿನಾಂಕ 8–7–2008.

**ಪ್ರಸ್ತಾವನೆ :**

ಸರ್ಕಾರದ ಆದೇಶದ ಸಂಖ್ಯೆ: ಸಿಒ 171 ಸಿಎಲ್‌ಎಂ 2006 ದಿನಾಂಕ 30–8–2006ರನ್ವಯ ಕರ್ನಾಟಕ ಸಹಕಾರಿ ಹಾಲು ಉತ್ಪಾದಕರ ಮಹಾಮಂಡಳದ ಶಾಸನಬದ್ಧ ಲೆಕ್ಕಪರಿಶೋಧನೆಯನ್ನು 2006–07ನೇ ಸಾಲಿನಿಂದ ಚಾರ್ಟರ್ಡ್ ಅಕೌಂಟೆಂಟರುಗಳಿಂದ ಮಾಡಿಸಲು ಕೆಲವು ಷರತ್ತುಗಳಿಗೊಳಪಟ್ಟು ಮೇಲೆ ಓದಲಾದ (1)ರ ಆದೇಶದಲ್ಲಿ ಅನುಮತಿ ನೀಡಲಾಗಿದೆ. ಸದರಿ ಸಂಸ್ಥೆಯ 2006–07ನೇ ಸಾಲಿನ ಶಾಸನಬದ್ಧ ಲೆಕ್ಕಪರಿಶೋಧನೆಯನ್ನು ಮಾಡುವ ಚಾರ್ಟರ್ಡ್ ಅಕೌಂಟೆಂಟರುಗಳಿಗೆ ಹಾಗೂ 2006–07ನೇ ಸಾಲಿನಿಂದ ಜಾರಿಗೆ ಬರುವಂತೆ ಲೆಕ್ಕ ಪರಿಶೋಧನಾ ಶುಲ್ಕ ಸಂಭಾವನೆಯನ್ನು ಪಾವತಿಸಲು ಮೇಲೆ ಓದಲಾದ (2)ರ ಆದೇಶದಲ್ಲಿ ಮಂಜೂರಾತಿಯನ್ನು ನೀಡಲಾಗಿದೆ.

ಕರ್ನಾಟಕ ಸಹಕಾರಿ ಹಾಲು ಉತ್ಪಾದಕರ ಮಹಾಮಂಡಳವು 2007–08ನೇ ಸಾಲಿನ ಲೆಕ್ಕಪರಿಶೋಧನೆಯನ್ನು ನಿರ್ವಹಿಸಲು ಮೆ. ಎಸ್.ಆರ್. ಮತ್ತು ಎಂ.ಆರ್. ಅಸೋಸಿಯೇಟ್ಸ್, ಬೆಂಗಳೂರು ಇವರಿಗೆ ವಹಿಸಿಕೊಟ್ಟಿರುತ್ತದೆ. ಸದರಿ ಚಾರ್ಟರ್ಡ್ ಅಕೌಂಟೆಂಟ್‌ರವರು ಸಂಸ್ಥೆಯ 2007–08ನೇ ಸಾಲಿನ ಶಾಸನಬದ್ಧ ಲೆಕ್ಕಪರಿಶೋಧನೆಯನ್ನು ನಿರ್ವಹಿಸುವುದಕ್ಕಾಗಿ ಅನ್ವಯಿಸುವ ಸೇವಾ ತೆರಿಗೆಯೊಂದಿಗೆ ರೂ. 6.00 ಲಕ್ಷಗಳ ಲೆಕ್ಕಪರಿಶೋಧನಾ ಶುಲ್ಕ ಹಾಗೂ ಇದರ ಜೊತೆಗೆ ಮಹಾಮಂಡಳದ ಸಿಬ್ಬಂದಿಯ ಸೇವಾ ನಿಯಮಗಳ ರೀತ್ಯಾ ಪ್ರವಾಸಭತ್ಯೆ ಮತ್ತು ಇತರೆ ವೆಚ್ಚಗಳನ್ನು ಪಾವತಿಸುವ ಬಗ್ಗೆ ಒಪ್ಪಿಗೆ ಸೂಚಿಸಲು ಮಹಾಮಂಡಳವನ್ನು ಕೋರಿರುತ್ತಾರೆ. ಕೆ.ಎಂ.ಎಫ್. ಸಂಸ್ಥೆಯು ಚಾರ್ಟರ್ಡ್ ಅಕೌಂಟೆಂಟ್‌ರವರು ಕೋರಿದ ಲೆಕ್ಕಪರಿಶೋಧನಾ ಶುಲ್ಕ/ಸಂಭಾವನೆ ಹಾಗೂ ಇತರೆ ಭತ್ಯೆಗಳನ್ನು ಪಾವತಿಸಲು ಒಪ್ಪಿಗೆ ನೀಡಿರುತ್ತದೆಂದು ತಿಳಿಸುತ್ತಾ, ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರು ಮೇಲೆ ಓದಲಾದ (3)ರ ಪತ್ರದ ಮೂಲಕ ಸರ್ಕಾರಕ್ಕೆ ಪ್ರಸ್ತಾವೆಯನ್ನು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 129 ಸಿಎಲ್‌ಎಮ್ 2008, ಬೆಂಗಳೂರು, ದಿನಾಂಕ: 25ನೇ ಜುಲೈ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರಿ ಹಾಲು ಉತ್ಪಾದಕರ ಮಹಾಮಂಡಳಿ ನಿಯಮಿತ., ಬೆಂಗಳೂರು ಇದರ 2007–08ನೇ ಸಾಲಿನ ಶಾಸನಬದ್ಧ ಲೆಕ್ಕಪರಿಶೋಧನೆಯನ್ನು ಕೈಗೊಳ್ಳುವ ಮೆ॥ ಎಸ್.ಆರ್. ಮತ್ತು ಎಂ.ಆರ್. ಅಸೋಸಿಯೇಟ್ಸ್, ರಾಜಾಜಿನಗರ, ಬೆಂಗಳೂರು ಇವರಿಗೆ ಸೇವಾ ತೆರಿಗೆಯೊಂದಿಗೆ ರೂ. 6.00 ಲಕ್ಷಗಳು ಮತ್ತು ಸಂಸ್ಥೆಯ ಅಧಿಕಾರಿ/ ಸಿಬ್ಬಂದಿಗಳಿಗೆ ಅನ್ವಯಿಸುವ ಸೇವಾ ಉಪ ನಿಯಮಗಳಲ್ಲಿ ನಿಗದಿಪಡಿಸಿರುವ ದರದಂತೆ ವಾಸ್ತವಿಕ ಆಧಾರದ ಮೇಲೆ ಇತರೆ ಭತ್ಯೆಗಳನ್ನು ಕರ್ನಾಟಕ ಸಹಕಾರಿ ಹಾಲು ಉತ್ಪಾದಕರ ಮಹಾಮಂಡಳವು ಪಾವತಿಸಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

**ಷರತ್ತುಗಳು:**

1) ಭಾರತೀಯ ಚಾರ್ಟರ್ಡ್ ಅಕೌಂಟೆಂಟರ ಸಂಸ್ಥೆಯಿಂದ ಅಂಗೀಕೃತವಾದ ಚಾರ್ಟರ್ಡ್ ಅಕೌಂಟೆಂಟರುಗಳ ಪಟ್ಟಿಯನ್ನು ಪಡೆದು ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 63(1)ರಡಿ ಲೆಕ್ಕಪರಿಶೋಧಕರೆಂದು ನೇಮಿಸತಕ್ಕದ್ದು.
2) ಚಾರ್ಟರ್ಡ್ ಅಕೌಂಟೆಂಟರುಗಳು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಮತ್ತು ನಿಯಮಗಳು 1960ರ ಪ್ರಕಾರ ಲೆಕ್ಕಪರಿಶೋಧನೆಯನ್ನು ನಿರ್ವಹಿಸತಕ್ಕದ್ದು.
3) ಕರ್ನಾಟಕ ಸಹಕಾರಿ ಹಾಲು ಉತ್ಪಾದಕರ ಮಹಾಮಂಡಳಿಯು ಲೆಕ್ಕಪರಿಶೋಧನಾ ಶುಲ್ಕ/ ಸಂಭಾವನೆಯನ್ನು ನೇರವಾಗಿ ಚಾರ್ಟರ್ಡ್ ಅಕೌಂಟೆಂಟರಿಗೆ ಪಾವತಿಸತಕ್ಕದ್ದು.
4) ಸದರಿ ಚಾರ್ಟರ್ಡ್ ಅಕೌಂಟೆಂಟರುಗಳು ಸಹಕಾರ ಸಂಘಗಳ ಲೆಕ್ಕಪರೀಶೋಧನಾ ನಿರ್ದೇಶಕರ ಮೇಲ್ವಿಚಾರಣೆ, ನಿರ್ದೇಶನ ಮತ್ತು ನಿಯಂತ್ರಣಗಳಡಿ ಕೆಲಸ ನಿರ್ವಹಿಸತಕ್ಕದ್ದು.
5) ಕರ್ನಾಟಕ ರಾಜ್ಯ ಸಹಕಾರಿ ಹಾಲು ಉತ್ಪಾದಕರ ಮಹಾಮಂಡಳಿಯು ಪ್ರತಿ ವರ್ಷ ಸರಕಾರಕ್ಕೆ ಸೇವಾ ಶುಲ್ಕದ ರೂಪದಲ್ಲಿ ರೂ. 10,000–00ಗಳನ್ನು ಲೆಕ್ಕಶೀರ್ಷಿಕೆ : ಸಹಕಾರ ಸಂಘಗಳ ಲೆಕ್ಕಪರಿಶೋಧನೆ ಇಲಾಖೆಯ ಇತರೆ ಜಮೆ (other receipts) ಉಪಲೆಕ್ಕಶೀರ್ಷಿಕೆಯಡಿ ಜಮಾ ಮಾಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1146

**ಆರ್.ಎಸ್. ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ ಮತ್ತು
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಎಸ್.ಎಂ. ಸಂಶಿ, ಬೆರಳಚ್ಚುಗಾರ, ಜಿಲ್ಲಾ ಪೊಲೀಸ್ ಕಛೇರಿ ಹುಬ್ಬಳ್ಳಿ–ಧಾರವಾಡ ನಗರರವರು ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಪ್ರಾಂಶುಪಾಲರು, ಪೊಲೀಸ್ ತರಬೇತಿ ಶಾಖೆ ಖಾನಾಪೂರ ಇವರ ಆದೇಶ ಸಂಖ್ಯೆ: ಸಿಬ್ಬಂದಿ:3:ಇವಿ:4:06–07, ದಿನಾಂಕ 2–6–2006.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಉಪ ಮಹಾ ನಿರೀಕ್ಷಕರು ತರಬೇತಿ, ಬೆಂಗಳೂರು ಇವರ ಆದೇಶ ಸಂಖ್ಯೆ: ತ:1:ಸಿಬ್ಬಂದಿ–141: 2005–06 ಓ.ಬಿ. 8: 07, ದಿನಾಂಕ 22–3–2007.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ 4–6–2007.

4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಅಪೀಲು (2)33: 07–08, ದಿನಾಂಕ 29–1–2008.

**ಪ್ರಸ್ತಾವನೆ :**

ಶ್ರೀ ಎಸ್.ಎಂ. ಸಂಶಿ, ಬೆರಳಚ್ಚುಗಾರ, ಜಿಲ್ಲಾ ಪೊಲೀಸ್ ಕಛೇರಿ ಹುಬ್ಬಳ್ಳಿ–ಧಾರವಾಡ ನಗರ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 7ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

1) ಶ್ರೀ ಎಸ್.ಎಂ. ಸಂಶಿ, ಬೆರಳಚ್ಚುಗಾರ, ಜಿಲ್ಲಾ ಪೊಲೀಸ್ ಕಛೇರಿ ಹುಬ್ಬಳ್ಳಿ–ಧಾರವಾಡ, ಇವರು ಸಿಬ್ಬಂದಿ–1 ಶಾಖೆಯ ಸಹಾಯಕರು 2006ನೇ ಸಾಲಿನ ಫೆಬ್ರವರಿ ಮಾಹೆಯ ಮೇಲಾಧಿಕಾರಿಗಳಿಗೆ ಕಳುಹಿಸುವ ಸ್ಥಳ ವಿವರಣಾ ಪಟ್ಟಿಗಳನ್ನು ದಿ: 1–3–2006 ರಂದು ಬೆರಳಚ್ಚು ಮಾಡಲು ಕೊಟ್ಟಿದ್ದರು. ಸದರಿ ವಿಚಾರಣಾ ಪಟ್ಟಿಗಳನ್ನು ದಿ: 5–3–2006 ರೊಳಗೆ ಮೇಲಾಧಿಕಾರಿಗಳಿಗೆ ಕಳುಹಿಸಬೇಕಿತ್ತು. ಆದರೆ, ಇವರು ಅವುಗಳನ್ನು ಬೆರಳಚ್ಚು ಮಾಡಿಕೊಡಲು ಇವರು ನಿರಾಕರಿಸಿದ್ದಕ್ಕೆ ವಿಷಯ ನಿರ್ವಾಹಕರು ಪ್ರಶಿಕ್ಷಣಾರ್ಥಿಯ ಸಹಾಯವನ್ನು ಪಡೆದು ವಿವರಣಾ ಪಟ್ಟಿಗಳನ್ನು ಕಳುಹಿಸಿರುತ್ತಾರೆ. ಕಾರಣ ಇವರು ಬೆರಳಚ್ಚುಗಾರರೆಂದು ಸರ್ಕಾರಿ ಸೇವೆಗೆ ಸೇರಿ, ವಹಿಸಿಕೊಟ್ಟ ಬೆರಳಚ್ಚಿನ ಕೆಲಸವನ್ನೇ ಮಾಡಲು ನಿರಾಕರಿಸಿ, ತಮ್ಮ ಕರ್ತವ್ಯಕ್ಕೆ ಚ್ಯುತಿಯನ್ನು ಎಸಗಿ ಅತೀವ ಕರ್ತವ್ಯ ನಿರ್ಲಕ್ಷ್ಯತೆ ಮತ್ತು ದುರ್ನಡತೆಯನ್ನು ಪ್ರದರ್ಶಿಸಿರುವಿರಿ ಎಂದು ಆರೋಪ ಹೊರಿಸಲಾಗಿದೆ.

2) ಶ್ರೀ ಎಸ್.ಎಂ. ಸಂಶಿ, ಬೆರಳಚ್ಚುಗಾರ, ಜಿಲ್ಲಾ ಪೊಲೀಸ್ ಕಛೇರಿ ಹುಬ್ಬಳ್ಳಿ–ಧಾರವಾಡ, ನೀವು ಈ ಕಛೇರಿಯಲ್ಲಿ ದಿ: 27–8–1993 ರಿಂದ ಕರ್ತವ್ಯ ನಿರ್ವಹಿಸುತ್ತಿದ್ದು, ರಾಜ್ಯದ ಇತರ ಕಡೆಯ ಕಛೇರಿಗಳಲ್ಲಿನ ಇಲಾಖೆಯ ಬೆರಳಚ್ಚುಗಾರರು ಗಣಕ ಯಂತ್ರದ ತರಬೇತಿಯನ್ನು ಪಡೆದು ಕಛೇರಿಯ ಕೆಲಸ ಕಾರ್ಯಗಳನ್ನು ಗಣಕ ಯಂತ್ರದ ಮೂಲಕ ನಿರ್ವಹಿಸುತ್ತಿರುವುದಾಗಿ ಗಮನಿಸಿ, ನಿಮ್ಮನ್ನು ಕೂಡ ದಿ: 20–9–2004 ರಿಂದ 24–9–2004ರ ವರೆಗೆ ಮತ್ತು ದಿ: 3–1–2005 ರಿಂದ 7–1–2005ರ ವರೆಗೆ ಒಟ್ಟು 10 ದಿನ ಜಿಲ್ಲಾ ತರಬೇತಿ ಸಂಸ್ಥೆ ಬೆಳಗಾವಿಯಲ್ಲಿ ಏರ್ಪಡಿಸಲಾಗಿದ್ದ ಗಣಕಯಂತ್ರದ ತರಬೇತಿಗೆ ನಿಯೋಜಿಸಲಾಗಿದ್ದು, ಅದಲ್ಲದೇ ದಿ: 4–1–2006 ರಿಂದ 2–2–2006ರ ವರೆಗೆ 30 ದಿನ ಎಸ್.ಸಿ.ಆರ್.ಟಿ. ಬೆಂಗಳೂರಿನಲ್ಲಿ ನಡೆದ ಸಿಸ್ಟಮ್ ಅಡ್ಮಿನಿಸ್ಟ್ರೇಟರ್ ತರಬೇತಿಗೆ ನಿಯೋಜಿಸಲಾಗಿತ್ತು. ಈ ತರಬೇತಿ ಶಾಲೆಯಲ್ಲಿ ಗಣಕಯಂತ್ರ ನಿರ್ವಹಿಸುವ ಹುದ್ದೆಗಳು ಇಲ್ಲದ ಕಾರಣ ನೀವು ಕಂಪ್ಯೂಟರ್ ತರಬೇತಿ ಪಡೆದಿದ್ದರಿಂದ ನಿಮಗೆ ಗಣಕ ಯಂತ್ರದ ಮೇಲೆ ಕಛೇರಿ ಕೆಲಸ ಕಾರ್ಯಗಳನ್ನು ನಿರ್ವಹಿಸುವಂತೆ ಸೂಚನೆ ನೀಡಲಾಗಿತ್ತು. ಆದರೆ ನೀವು ಕಂಪ್ಯೂಟರ್ ಮೇಲೆ ಕಾಗದ ಪತ್ರಗಳನ್ನು ತಯಾರಿಸುವುದರಿಂದ ಬೆರಳಚ್ಚು ಯಂತ್ರ ಮೇಲೆ ಹಿಡಿತ ಸಾಧಿಸಲು ಸಾಧ್ಯವಿಲ್ಲವೆಂದು ತಿಳಿಸುತ್ತ ದಿ: 6–3–2006 ರಂದು ಕಂಪ್ಯೂಟರ್ ಮರಳಿ ಒಪ್ಪಿಸಿರುತ್ತೀರಿ. ದಿ: 13–3–2006ರಂದು ಮುಂಜಾನೆ 11–35 ಗಂಟೆಗೆ ಪ್ರಾಂಶುಪಾಲರು ಗಣಕ ಯಂತ್ರ ಮತ್ತು ಬೆರಳಚ್ಚು ಯಂತ್ರಗಳು (2) ಮೇಲೆ ಕಾಗದ ಪತ್ರಗಳನ್ನು ತಯಾರಿಸಲು ಸೂಚಿಸಿದಾಗ ತನ್ನಿಂದ ಸಾಧ್ಯವಿಲ್ಲವೆಂದು ಹೇಳುತ್ತ ಪ್ರಾಂಶುಪಾಲರೊಂದಿಗೆ ಅಸಭ್ಯ ರೀತಿಯಲ್ಲಿ ವರ್ತಿಸಿರುತ್ತೀರಿ ಎಂದು ಆರೋಪ ಹೊರಿಸಲಾಗಿದೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪ್ರಾಂಶುಪಾಲರು, ಪೊಲೀಸ್ ತರಬೇತಿ ಶಾಖೆ ಖಾನಾಪೂರ ಇವರು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ 2–6–2006ರ ಆದೇಶದಲ್ಲಿ ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಒಂದು ವರ್ಷ ಕಾಲ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಉಪ ಮಹಾ ನಿರೀಕ್ಷಕರು ತರಬೇತಿ, ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ 22–3–2007ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ.

ಅರ್ಜಿದಾರರು ತಮ್ಮ ಮೇಲಿನ ದೋಷಾರೋಪಣೆಗಳನ್ನು ತಳ್ಳಿ ಹಾಕಲು ಯಾವುದೇ ಕಾರಣಗಳನ್ನು ತಿಳಿಸಿರುವುದಿಲ್ಲ. ಬದಲಾಗಿ ತಮ್ಮ ವಿರುದ್ಧ ಷಡ್ಯಂತರ ರಚಿಸಿ ಗುಂಪುಗಾರಿಕೆ, ನೀಚ ಬುದ್ದಿಯಿಂದ ಗೂಂಡಾಗಿರಿ ಪ್ರವೃತ್ತಿಯನ್ನು ಹೊಂದಿ ಸುಳ್ಳು ಆಪಾದನೆಗಳನ್ನು ಹೊರಿಸಿ ಶಿಕ್ಷೆ ವಿಧಿಸಿರುವುದರಿಂದ ತಮಗೆ ಆರ್ಥಿಕವಾಗಿ ಮತ್ತು ದೈಹಿಕವಾಗಿ ತೊಂದರೆಯಾಗಿದೆಯೆಂದು ತಿಳಿಸಿರುತ್ತಾರೆ. ತಮ್ಮ ವಿರುದ್ಧ ಹೊರಿಸಲಾದ ಆಪಾದನೆಗಳನ್ನು ನಿರಾಕರಿಸಿ ಶಿಕ್ಷೆಯನ್ನು ರದ್ದುಪಡಿಸುವ ಬಗ್ಗೆ ಯಾವುದೇ ದೃಢಪಡುವ ದಾಖಲೆ ಅಥವಾ ಅಂಶಗಳನ್ನು ತಿಳಿಸಿರುವುದಿಲ್ಲ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 61 ಪೊಸಿಅ 2008, ಬೆಂಗಳೂರು, ದಿನಾಂಕ: 23ನೇ ಜೂನ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್.ಎಂ. ಸಂಶಿ, ಬೆರಳಚ್ಚುಗಾರ, ಜಿಲ್ಲಾ ಪೊಲೀಸ್ ಕಛೇರಿ ಹುಬ್ಬಳ್ಳಿ–ಧಾರವಾಡ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 990

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ಶಿಕ್ಷಣ ಸಚಿವಾಲಯ**

**ವಿಷಯ :** 2008–09ನೇ ಸಾಲಿಗೆ ರಾಜ್ಯ ವಲಯ ಯೋಜನೆಯ ಮುಂದುವರಿಕೆ ಕಾರ್ಯಕ್ರಮದಡಿ ಉಪನಿರ್ದೇಶಕರ ಹಾಗೂ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ ಕಟ್ಟಡ ನಿರ್ಮಾಣ ಹಾಗೂ ದುರಸ್ತಿಗಾಗಿ ಅನುದಾನ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಇಡಿ 78 ಯೋಯೋಕ 2008, ದಿನಾಂಕ 4–4–2008.
2. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರುರವರ ಪತ್ರ ಸಂಖ್ಯೆ ಯೋ (7) ಉ. ನಿ.ಕ್ಷೇ.ಶಿ.ಕ.ದು.ಅ1/2008–09/ ದಿನಾಂಕ 29–4–2008.

**ಪ್ರಸ್ತಾವನೆ :**

(1) ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ 2008–09ನೇ ಸಾಲಿಗೆ ಮುಂದುವರಿಕೆ ಕಾರ್ಯಕ್ರಮಗಳಿಗೆ ಅನುಮೋದನೆ ನೀಡಿ, ಉಪ ನಿರ್ದೇಶಕರ ಹಾಗೂ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ ಕಟ್ಟಡ ನಿರ್ಮಾಣ ಹಾಗೂ ದುರಸ್ತಿಗಾಗಿ 300.00 ಲಕ್ಷ ರೂ.ಗಳನ್ನು ಒದಗಿಸಲಾಗಿದೆ.

(2) ಮೇಲೆ (2)ರಲ್ಲಿ ಓದಲಾದ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರ ಪತ್ರದಲ್ಲಿ 2008–09ನೇ ಸಾಲಿಗೆ ಲೆಕ್ಕಶೀರ್ಷಿಕೆ 2202–02–800–1–1–059 ರಡಿ 300.00 ಲಕ್ಷ ರೂಗಳನ್ನು ಒದಗಿಸಿದ್ದು, ಅದರಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆ ಉಪ ನಿರ್ದೇಶಕರ ಹಾಗೂ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ ಕಟ್ಟಡ ನಿರ್ಮಾಣ, ಸೇರ್ಪಡೆ ಮಾರ್ಪಾಡು ಹಾಗೂ ದುರಸ್ತಿ ಕಾರ್ಯಗಳಿಗಾಗಿ, 250.00 ಲಕ್ಷ ರೂ.ಗಳಗೆ ಜಿಲ್ಲಾವಾರು ಪಟ್ಟಿಯನ್ನು ತಯಾರಿಸಿ ಅನುದಾನವನ್ನು ಹಂಚಿಕೆ ಮಾಡಲು ಸರ್ಕಾರದ ಆದೇಶವನ್ನು ಕೋರಿರುತ್ತಾರೆ.

(3) ಸದರಿ ಅನುದಾನ ಹಂಚಿಕೆ ಮಾಡಿ ಬಿಡುಗಡೆ ಮಾಡುವ ಬಗ್ಗೆ ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 132 ಯೋಸಕ 2008, ಬೆಂಗಳೂರು, ದಿನಾಂಕ: 30ನೇ ಜೂನ್ 2008.**

**(ಇಡಿ 131 ಸ್ಕೀಮರ (ಯುನಿಕ್) 2008, ದಿನಾಂಕ 30–6–2008)**

(4) 2008–09ನೇ ಸಾಲಿಗೆ ಲೆಕ್ಕಶೀರ್ಷಿಕೆ 2202–02–800–1–10–059 (ಯೋಜನೆ) ಅಡಿ ಒದಗಿಸಲಾಗಿರುವ ಅನುದಾನದಲ್ಲಿ 250.00 ಲಕ್ಷ ರೂ.ಗಳನ್ನು (ಇನ್ನೂರಾ ಐವತ್ತು ಲಕ್ಷ ರೂಪಾಯಿಗಳು ಮಾತ್ರ) ಅನುಬಂಧದಲ್ಲಿ ನಮೂದಿಸಿರುವಂತೆ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪ ನಿರ್ದೇಶಕರ ಹಾಗೂ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ ಕಟ್ಟಡ ನಿರ್ಮಾಣ, ಸೇರ್ಪಡೆ ಮಾರ್ಪಾಡು ಹಾಗೂ ದುರಸ್ತಿ ಕಾರ್ಯಗಳಿಗಾಗಿ, ಬಿಡುಗಡೆ ಮಾಡಲು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಅನುಮೋದನೆ ನೀಡಿದೆ.

(5) ಪ್ರತಿ ಮಾಹೆಯೂ ಎಂ.ಎಂ.ಆರ್. ವರದಿಯಲ್ಲಿ ಕಾಮಗಾರಿಯ ಭೌತಿಕ ಮತ್ತು ಆರ್ಥಿಕ ಪ್ರಗತಿ ವರದಿಯನ್ನು ತಪ್ಪದೇ ಸಲ್ಲಿಸತಕ್ಕದ್ದು.

(6) ಕಾಮಗಾರಿಯ ಗುಣಮಟ್ಟದ ಬಗ್ಗೆ ಇಲಾಖೆಯ ಜವಾಬ್ದಾರಿಯುತ ಅಧಿಕಾರಿಗಳು ಆಗಿಂದ್ದಾಗ್ಗೆ ಪರಿಶೀಲನೆ ನಡೆಸಲು ಆದೇಶಿಸಲಾಗಿದೆ.

(7) ಖರೀದಿಗಳಿಗೆ ಸಂಬಂಧಿಸಿದಂತೆ, ಎಲ್ಲಾ ಖರೀದಿ ನಿಯಮಗಳನ್ನು ಹಾಗೂ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧ್ಯಾದೇಶ 2000 ಮತ್ತು ಅದರಡಿಯಲ್ಲಿನ ನಿಯಮಗಳನ್ನು ಚಾಚೂ ತಪ್ಪದೇ ಕಡ್ಡಾಯವಾಗಿ ಪಾಲಿಸತಕ್ಕದ್ದು.

(8) ಈ ಆದೇಶವನ್ನು ಯೋಜನಾ ಇಲಾಖೆ ಮತ್ತು ಆರ್ಥಿಕ ಇಲಾಖೆಗಳು ಕ್ರಮವಾಗಿ ತಮ್ಮ ಅನಧಿಕೃತ ಟಿಪ್ಪಣಿ ಸಂಖ್ಯೆ: ಯೋಇ 22 ಜಶ 2008, ದಿನಾಂಕ 29–3–2008 ಮತ್ತು ಸಂಖ್ಯೆ: ಆ.ಇ. 376 ವೆಚ್ಚ–8–2008, ದಿನಾಂಕ 4–4–2008ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಐ.ಎಫ್. ಮಾಗಿ**

ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಯೋಜನೆ)

**ಸರ್ಕಾರಿ ಆದೇಶ ಸಂಖ್ಯೆ: ಇಡಿ 132 ಯೋಸಕ 2008, ಬೆಂಗಳೂರು, ದಿನಾಂಕ: 30–6–2008.**
**(ಇಡಿ 131 ಸ್ವೀಮರ (ಯುನಿಕ್) 2008, ದಿನಾಂಕ 30–6–2008)ಕ್ಕೆ ಅನುಬಂಧ**

| ಕ್ರ.ಸಂ. | ಕಟ್ಟಡ ನಿರ್ಮಾಣ ಮಾಡಬೇಕಾದ ಕಛೇರಿ | ಬಿಡುಗಡೆ ಮಾಡುತ್ತಿರುವ ಅನುದಾನ (ಲಕ್ಷ ರೂ.ಗಳಲ್ಲಿ) |
|---|---|---|
| 1 | ಉಪ ನಿರ್ದೇಶಕರ ಕಛೇರಿ, ಚಿಕ್ಕೋಡಿ | 65.00 |
| 2 | ಉಪ ನಿರ್ದೇಶಕರ ಕಛೇರಿ, ಯಾದಗಿರಿ | 08.50 |
| 3 | ಉತ್ತರ ಕನ್ನಡ ಜಿಲ್ಲೆ ಉಪ ನಿರ್ದೇಶಕರ ಕಛೇರಿಗೆ ಮೀಟಿಂಗ್ ಹಾಲ್ ನಿರ್ಮಾಣ | 10.00 |
| 4 | ಮಧುಗಿರಿ ಉಪ ನಿರ್ದೇಶಕರ ಕಛೇರಿಗೆ ಮೀಟಿಂಗ್ ಹಾಲ್ ನಿರ್ಮಾಣ | 10.00 |
| 5 | ಬಳ್ಳಾರಿ ಜಿಲ್ಲೆ ಉಪ ನಿರ್ದೇಶಕರ ಕಛೇರಿಗೆ ಮೀಟಿಂಗ್ ಹಾಲ್ ನಿರ್ಮಾಣ | 10.00 |
| 6 | ರಾಮನಗರ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ ನಿರ್ಮಾಣ | 45.00 |
| 7 | ಚಿಂಚೋಳಿ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ ನಿರ್ಮಾಣ | 45.00 |
| 8 | ಶಿವಮೊಗ್ಗ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ ನಿರ್ಮಾಣ | 02.00 |
| | **ಒಟ್ಟು** | **195.50** |
| | **ದುರಸ್ತಿ** | |
| 1 | ಮೈಸೂರು ಉಪ ನಿರ್ದೇಶಕರ ಕಛೇರಿ ದುರಸ್ತಿ | 10.00 |
| 2 | ಉಡುಪಿ ಉಪ ನಿರ್ದೇಶಕರ ಕಛೇರಿ ದುರಸ್ತಿ | 02.00 |
| 3 | ಚಿಕ್ಕಬಳ್ಳಾಪುರ ಉಪ ನಿರ್ದೇಶಕರ ಕಛೇರಿ ದುರಸ್ತಿ | 01.50 |
| 4 | ಬೆಂಗಳೂರು ಉತ್ತರ ಜಿಲ್ಲೆ ಉಪ ನಿರ್ದೇಶಕರ ಕಛೇರಿ ದುರಸ್ತಿ | 01.00 |
| 5 | ಬೆಂಗಳೂರು ಗ್ರಾಮಾಂತರ ಜಿಲ್ಲೆ ಉಪ ನಿರ್ದೇಶಕರ ಕಛೇರಿ ದುರಸ್ತಿ | 01.00 |
| 6 | ಮಂಡ್ಯ ಉಪ ನಿರ್ದೇಶಕರ ಕಛೇರಿ ದುರಸ್ತಿ | 05.00 |
| 7 | ಕೋಲಾರ ಉಪ ನಿರ್ದೇಶಕರ ಕಛೇರಿ ದುರಸ್ತಿ | 08.00 |
| 8 | ಧಾರವಾಡ ಉಪ ನಿರ್ದೇಶಕರ ಕಛೇರಿ ದುರಸ್ತಿ | 08.00 |
| 9 | ಮಾಗಡಿ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ ದುರಸ್ತಿ | 02.00 |
| 10 | ಕುಷ್ಠಗಿ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ ದುರಸ್ತಿ | 03.00 |
| 11 | ಬೈಲಹೊಂಗಲ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ ದುರಸ್ತಿ | 05.00 |
| 12 | ಇಂಡಿ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ ದುರಸ್ತಿ | 04.00 |

| ಕ್ರ.ಸಂ. | ಕಟ್ಟಡ ನಿರ್ಮಾಣ ಮಾಡಬೇಕಾದ ಕಛೇರಿ | ಬಿಡುಗಡೆ ಮಾಡುತ್ತಿರುವ ಅನುದಾನ (ಲಕ್ಷ ರೂ.ಗಳಲ್ಲಿ) |
|---|---|---|
| 13 | ಗುಲ್ಬರ್ಗಾ ಉತ್ತರ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ ದುರಸ್ತಿ | 01.50 |
| 14 | ಜೇವರ್ಗಿ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ ದುರಸ್ತಿ | 01.00 |
| 15 | ಸೇಡಂ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ ದುರಸ್ತಿ | 01.50 |
| | **ಒಟ್ಟು** | **54.50** |

**ಐ.ಎಫ್. ಮಾಗಿ**

ಪಿ.ಆರ್. 1036

ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಯೋಜನೆ)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ :** ಶ್ರೀ ಮಹಮದ್ ಸಲ್ಲಾವುದ್ದೀನ್ ಕೆ.ಎ.ಎಸ್. (ಹಿ.ಶ್ರೇ.) ಅಧಿಕಾರಿ ಇವರ ವಿರುದ್ಧ ಕ್ರಿಮಿನಲ್ ಮೊಕದ್ದಮೆ–ಆರೋಪಮುಕ್ತರನ್ನಾಗಿಸಿ ಅಂತಿಮ ಅದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** ಸರ್ಕಾರ ಆದೇಶ ಸಂ: ಸಿಆಸುಇ 92 ಎಸ್‌ಇಎನ್ 2001, ದಿ: 2–2–01.

**ಪ್ರಸ್ತಾವನೆ :**

ಶ್ರೀ ಮಹಮದ್ ಸಲ್ಲಾವುದ್ದೀನ್, ಕೆ.ಎ.ಎಸ್. ಅಧಿಕಾರಿ ರವರು ಕೃಷ್ಣ ಮೇಲ್ದಂಡೆ ಯೋಜನೆಯ ಆಲಮಟ್ಟಿಯಲ್ಲಿ, ಪುನರ್ ವಸತಿ ಅಧಿಕಾರಿ ಹುದ್ದೆಯಲ್ಲಿ, ಶ್ರೀ ಎ.ಎಂ. ಗಿರಿನಿವಾಸ್ ಅವರು ಕಂದಾಯ ನಿರೀಕ್ಷಕರ ಹುದ್ದೆಯಲ್ಲಿ ಮತ್ತು ಎನ್.ವಿ. ಹೆದ್ದಲೂರು ರವರು ಪ್ರ.ದ.ಸ. ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಕೃಷ್ಣ ಮೇಲ್ದಂಡೆ ಯೋಜನೆಯಿಂದ ಬಾದಿತರಾದ ಸಂತ್ರಸ್ತ ಕುಟುಂಬಗಳಿಗೆ ಮನೆ ಕಟ್ಟಿಕೊಳ್ಳುವ ಸಲುವಾಗಿ ಸರ್ಕಾರದಿಂದ ನೀಡಲ್ಪಡುವ ರೂ. 22 ಸಾವಿರ ರೂಪಾಯಿಗಳ ಪೈಕಿ ಮೊದಲನೇ ಕಂತಾಗಿ ನೀಡುವ ರೂ. 11 ಸಾವಿರ ರೂಪಾಯಿಗಳ ಚೆಕ್ಕನ್ನು ನೀಡುವಲ್ಲಿ ಫಲಾನುಭವಿ ಶ್ರೀ ಮುತ್ತಪ್ಪ ದಾಸಬಾದಾಳ್ ಗ್ರಾಮ, ಹುನಗುಂದ ತಾಲ್ಲೂಕು ಅವರಿಂದ ರೂ. 2 ಸಾವಿರ ರೂಪಾಯಿಗಳ ಅಕ್ರಮ ಸಂಭಾವನೆಗಾಗಿ ಒತ್ತಾಯಿಸುತ್ತಿರುವ ಕುರಿತಂತೆ ದೂರುದಾರರು ನೀಡಿರುವ ದೂರನ್ನು ಕರ್ನಾಟಕ ಲೋಕಾಯುಕ್ತ ಪೊಲೀಸ್ ವಿಭಾಗವು 1988ರ ಲಂಚ ನಿರ್ಮೂಲನಾ ಕಾಯ್ದೆ 7.13(1)(ಡಿ) ಓದಿಕೊಂಡಂತೆ 13(2)ರನ್ವಯ ಕ್ರಿಮಿನಲ್ ಮೊಕದ್ದಮೆ ಸಂಖ್ಯೆ 8/96 ಅನ್ನು ದಾಖಲಿಸಿಕೊಂಡು, ಈ ಅಕ್ರಮ ಸಂಭಾವನೆಯನ್ನು ಸದರಿ ಕಛೇರಿಯ ಡಿ–ದರ್ಜೆಯ ನೌಕರ ಶ್ರೀ ಬಿ.ಎನ್. ಚಿಕ್ಕಲಗಿ ಅವರ ಮುಖಾಂತರ ದಿ: 28–8–96 ರಂದು ಪಡೆಯುತ್ತಿದ್ದಾಗ ಕರ್ನಾಟಕ ಲೋಕಾಯುಕ್ತ ಪೊಲೀಸ್ ವಿಭಾಗವು ಬೀಸಿದ ಬಲೆಗೆ ಸಿಕ್ಕಿಬಿದ್ದಿರುತ್ತಾರೆ.

ಶ್ರೀ ಮಹಮದ್ ಸಲ್ಲಾವುದ್ದೀನ್ ಕೆ.ಎ.ಎಸ್. ಮತ್ತು ಶ್ರೀ ಎ.ಎಂ. ಗಿರಿನಿವಾಸ್, ಕಂದಾಯ ನಿರೀಕ್ಷಕರು ರವರುಗಳ ವಿರುದ್ಧ 1988ರ ಲಂಚ ನಿರ್ಮೂಲನಾ ಕಾಯ್ದೆ ಅಡಿಯಲ್ಲಿ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಗಗೊಳಿಸಲು ಕರ್ನಾಟಕ ಲೋಕಾಯುಕ್ತ ಪೊಲೀಸ್ ವಿಭಾಗವು ಮಂಜೂರಾತಿ ಕೋರಿದ ಪ್ರಸ್ತಾವನೆಯನ್ವಯ ಮೇಲೆ ಓದಲಾದ ದಿ: 2–2–01ರ ಆದೇಶದನ್ವಯ ಅವರನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಗಗೊಳಿಸಲು ಕರ್ನಾಟಕ ಲೋಕಾಯುಕ್ತ ಪೊಲೀಸರಿಗೆ ಅನುಮತಿ ನೀಡಿ ಅದೇಶ ಹೊರಡಿಸಲಾಗಿತ್ತು. ಸರ್ಕಾರದ ಅನುಮತಿ ಮೇರೆಗೆ ಲೋಕಾಯುಕ್ತ ಪೊಲೀಸ್ ವಿಭಾಗವು ಅಧಿಕಾರಿಯವರ ವಿರುದ್ಧ ಬಿಜಾಪುರ ಜಿಲ್ಲಾ ವಿಶೇಷ ನ್ಯಾಯಾಲಯದಲ್ಲಿ ದೋಷಾರೋಪಣೆ ಪಟ್ಟಿ ಸಲ್ಲಿಸಿದ್ದರು. ಪ್ರಕರಣ ಸಂ: 11/2001 ರಂತೆ ವಿಚಾರಣೆ ನಡೆಸಿದ ವಿಶೇಷ ನ್ಯಾಯಾಲಯವು ದಿ: 4–2–06 ರಂದು ತೀರ್ಪು ನೀಡಿ ಶ್ರೀ ಮಹಮದ್ ಸಲ್ಲಾವುದ್ದೀನ್ ಕೆ.ಎ.ಎಸ್. ಅಧಿಕಾರಿ ಮತ್ತು ಶ್ರೀ ಎ.ಎಂ. ಗಿರಿನಿವಾಸ್, ಕಂದಾಯ ನಿರೀಕ್ಷಕರು ಯು.ಕೆ.ಪಿ. ಆಲಮಟ್ಟಿ ಬಿಜಾಪುರ ಇವರನ್ನು ಆರೋಪಮುಕ್ತ ಮಾಡಿರುತ್ತದೆ. ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಲು ಯೋಗ್ಯವಲ್ಲವೆಂದು ಸರ್ಕಾರವು (ಗೃಹ ಇಲಾಖೆಯಲ್ಲಿ) ಅಂತಿಮ ತೀರ್ಮಾನ ತೆಗೆದುಕೊಂಡಿದೆ. ಈ ಹಿನ್ನೆಲೆಯಲ್ಲಿ ಶ್ರೀ ಮಹಮದ್ ಸಲ್ಲಾವುದ್ದೀನ್, ಕೆ.ಎ.ಎಸ್. ಅಧಿಕಾರಿ ಮತ್ತು ಶ್ರೀ ಎ.ಎಂ. ಗಿರಿವಾಸ್, ಕಂದಾಯ ನಿರೀಕ್ಷಕರು, ಯು.ಕೆ.ಪಿ. ಆಲಮಟ್ಟಿ ಬಿಜಾಪುರ, ಇವರುಗಳನ್ನು ಈ ಮೊಕದ್ದಮೆಯಿಂದ ಮುಕ್ತರನ್ನಾಗಿಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 92 ಎಸ್‌ಇಎನ್ 99 (ಸಿಆಸುಇ 211 ಕೆಇವಿ 07) ಬೆಂಗಳೂರು,**
**ದಿನಾಂಕ: 26ನೇ ಜುಲೈ 2008.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಶ್ರೀ ಮಹಮದ್ ಸಲ್ಲಾವುದ್ದೀನ್ ಕೆ.ಎ.ಎಸ್. ಅಧಿಕಾರಿ ಅಂದಿನ ಪುನರ್‌ವಸತಿ ಅಧಿಕಾರಿ ಕೃಷ್ಣ ಮೇಲ್ದಂಡೆ ಯೋಜನೆ ಆಲಮಟ್ಟಿ ಮತ್ತು ಶ್ರೀ ಎ.ಎಂ. ಗಿರಿನಿವಾಸ್, ಕಂದಾಯ ನಿರೀಕ್ಷಕರು

ಯು.ಕೆ.ಪಿ. ಆಲಮಟ್ಟಿ ಬಿಜಾಪುರ ಇವರುಗಳ ವಿರುದ್ಧ ಲಂಚ ಪ್ರಕರಣಕ್ಕೆ ಸಂಬಂಧಿಸಿದಂತೆ ವಿಜಾಪುರ ವಿಶೇಷ ನ್ಯಾಯಾಲಯದಲ್ಲಿ ದಾಖಲಾಗಿರುವ ಕ್ರಿಮಿನಲ್ ಮೊಕದ್ದಮೆ ಸಂ: 11/2001 ರಲ್ಲಿ ದಿ: 4-2-06ರಂದು ನ್ಯಾಯಾಲಯವು ನೀಡಿರುವ ತೀರ್ಪನ್ನು ಪರಿಗಣಿಸಿ ಸರ್ಕಾರವು ಅವರನ್ನು ಅರೋಪಮುಕ್ತನ್ನಾಗಿಸುತ್ತದೆ.

ಈ ಮೊಕದ್ದಮೆ ನಡೆಯದಿದ್ದಲ್ಲಿ ಅವರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1155

**ಹೆಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಆಸುಇ (ಸೇವೆಗಳು-2)

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ಶ್ರೀ ರಾಮಪ್ಪ ಕಲ್ಲಪ್ಪ ನಿಂಗನೂರೆ, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಬೈಲಹೊಂಗಲ ಇವರ ವಿರುದ್ಧ ಟ್ರ್ಯಾಪ್ ಪ್ರಕರಣ – ವಿಚಾರಣೆ ಬಾಕಿ ಇಟ್ಟು ಅಮಾನತ್ತನ್ನು ತೆರವುಗೊಳಿಸುವ ಬಗ್ಗೆ ಆದೇಶ.

**ಓದಲಾಗಿದೆ:**
1. ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಎಲ್-28/ಸಿಆರ್-13/2008/ ಬಿಜಿಎಂ, ದಿ: 5-4-2008.
2. ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 18 ಇಎನ್‌ಕ್ಯೂ 08, ದಿನಾಂಕ 22-4-2008.
3. ಶ್ರೀ ನಿಂಗನೂರೆ, ಸ.ಕಾ.ಇಂ. ಇವರ ಮನವಿ ದಿನಾಂಕ 16-5-2008.

**ಪ್ರಸ್ತಾವನೆ :**

ಶ್ರೀ ರಾಮಪ್ಪ ಕಲ್ಲಪ್ಪ ನಿಂಗನೂರೆ, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಬೈಲಹೊಂಗಲ ಇವರು ನೀರು ಸರಬರಾಜು ಯೋಜನೆಯಲ್ಲಿ ಗುರ್ಜುರ ಗ್ರಾಮದಿಂದ ಗುಡ್ಡದೂರು ಗ್ರಾಮದವರೆಗೆ ಹಾಕಲಾದ ಪೈಪ್‌ಲೈನ್ ಕಾಮಗಾರಿ ಸಂಬಂಧ ರೂ. 4,25,936/-ಗಳ ಚೆಕ್‌ನ್ನು ಫಿರ್ಯಾದುದಾರರಾದ ಶ್ರೀ ಅಬ್ಬಾಸ್ ಅಕ್ಬರ್ ಸಾಬ್ ಮಿರ್ಜಣ್ಣವರ್, ಕೆ.ಆರ್.ಸಿ. ನಗರ, ಇವರಿಗೆ ಬಿಡುಗಡೆ ಮಾಡಲು ರೂ. 38,000/-ಗಳ ಲಂಚದ ಹಣಕ್ಕಾಗಿ ಒತ್ತಾಯಿಸಿ, ಅದನ್ನು ದಿನಾಂಕ 4-4-2008 ರಂದು ಪಡೆಯುತ್ತಿದ್ದ ಸಮಯದಲ್ಲಿ ಲೋಕಾಯುಕ್ತದ ತನಿಖಾಧಿಕಾರಿ ಮತ್ತು ಅವರ ಸಿಬ್ಬಂದಿ ವರ್ಗದವರು ಆರೋಪಿತರ ಕಛೇರಿಯಲ್ಲಿ ಬೀಸಿದ (ಟ್ರ್ಯಾಪ್) ಬಲೆಯಲ್ಲಿ ಆರೋಪಿತರಾದ ಶ್ರೀ ರಾಮಪ್ಪ ಕಲ್ಲಪ್ಪ ನಿಂಗನೂರೆ, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಬೈಲಹೊಂಗಲ ಇವರು ಸಿಕ್ಕಿಹಾಕಿಕೊಂಡಿರುತ್ತಾರೆಂದು, ಸದರಿ ಅಧಿಕಾರಿಯನ್ನು ದಸ್ತಗಿರಿ ಮಾಡಿ ನ್ಯಾಯಾಲಯದ ಮುಂದೆ ಹಾಜರುಪಡಿಸಲಾಗಿದೆ ಹಾಗೂ ಪ್ರಕರಣದ ತನಿಖೆ ಮುಂದುವರಿದಿದೆ ಎಂದು ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ ಓದಲಾದ (1)ರ ಪತ್ರದಲ್ಲಿ ವರದಿ ಮಾಡಿದ್ದರು ಮತ್ತು ಶ್ರೀ ರಾಮಪ್ಪ ಕಲ್ಲಪ್ಪ ನಿಂಗನೂರೆ, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಬೈಲಹೊಂಗಲ ಇವರು ಪ್ರಕರಣದ ಸುಗಮ ತನಿಖೆಗೆ ಅಡ್ಡಿ ಉಂಟು ಮಾಡುವ ಅಥವಾ ತನಿಖೆಯಲ್ಲಿ ಹಸ್ತಕ್ಷೇಪ ಮಾಡುವ ಹಾಗೂ ಸಾಕ್ಷಿ ಪುರಾವೆಗಳನ್ನು ನಾಶಗೊಳಿಸುವ ಸಾಧ್ಯತೆಗಳಿರುವುದರಿಂದ ಅವರನ್ನು ಕೂಡಲೇ ಅಮಾನತ್ತಿನಲ್ಲಿಡಬೇಕೆಂದು ಹಾಗೂ ಅವರ ಲೀನ್ (ಸ್ಥಾನ) ವನ್ನು ಬೇರೆ ಕಡೆಗೆ ವರ್ಗಾಯಿಸಲು ಕೋರಿದ್ದರು.

ಲೋಕಾಯುಕ್ತದ ಅಪರ ಪೊಲೀಸ್ ಮಹಾ ನಿರ್ದೇಶಕರು ಮೇಲೆ ಹೇಳಿರುವ ತಮ್ಮ ಪತ್ರದಲ್ಲಿ ಮಾಡಿರುವ ವರದಿಯನ್ನು ಪರಿಶೀಲಿಸಿ, ಸರ್ಕಾರವು ಮೇಲೆ ಓದಲಾದ (2)ರ ಆದೇಶದಲ್ಲಿ ಶ್ರೀ ರಾಮಪ್ಪ ಕಲ್ಲಪ್ಪ ನಿಂಗನೂರೆ, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಬೈಲಹೊಂಗಲ ಇವರ ಮೇಲಿನ ಇಲಾಖಾ ವಿಚಾರಣೆ/ ಕ್ರಿಮಿನಲ್ ಮೊಕದ್ದಮೆಯನ್ನು ಬಾಕಿ ಇಟ್ಟು, ಸೇವೆಯಿಂದ ಅಮಾನತ್ತಿನಲ್ಲಿಡಲಾಗಿತ್ತು.

ಶ್ರೀ ರಾಮಪ್ಪ ಕಲ್ಲಪ್ಪ ನಿಂಗನೂರೆ, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಇವರ ವಿರುದ್ಧ ಭ್ರಷ್ಟಾಚಾರ ನಿರೋಧ ಕಾಯ್ದೆ 1988ರ ಕಲಂ 7, 13(1)(ಡಿ) ಜೊತೆಯಲ್ಲಿ ಓದಲಾದ ಕಲಂ 13(2)ರ ಅಡಿಯಲ್ಲಿ ಮೊಕದ್ದಮೆ ಸಂಖ್ಯೆ: 13/2008ನ್ನು ದಾಖಲಿಸಲಾಗಿದೆ.

ಶ್ರೀ ರಾಮಪ್ಪ ಕಲ್ಲಪ್ಪ ನಿಂಗನೂರೆ, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಇವರು ಮೇಲೆ ಓದಲಾದ (3)ರ ಮನವಿಯಲ್ಲಿ, ತಾವು ಯಾರಿಂದಲೂ ಲಂಚ ಕೇಳಿರುವುದಿಲ್ಲವೆಂದೂ ಪ್ರಕರಣದಲ್ಲಿ ತಮ್ಮ ವಿರುದ್ಧ ಸುಳ್ಳು ಆಪಾದನೆ ಮಾಡಲಾಗಿದೆ ಎಂದೂ, ಲೋಕಾಯುಕ್ತ ದಾಳಿ ಸಮಯದಲ್ಲಿ ತಾವು ಯಾವುದೇ ಲಂಚದ ಹಣ ಮುಟ್ಟಿರುವುದಿಲ್ಲವೆಂದೂ,

ಅಂದು ತಮ್ಮ ಎರಡೂ ಕೈ ಬೆರಳುಗಳನ್ನು ನೀರು ಮತ್ತು ಸೋಡಿಯಂ ಕಾರ್ಬೋನೇಟ್ ಮಿಶ್ರಿತ ದ್ರಾವಣದಲ್ಲಿ ಅದ್ದಿ ತೊಳೆಸಿದಾಗ ದ್ರಾವಣವು ಯಾವುದೇ ಬಣ್ಣಕ್ಕೆ ರೂಪಾಂತರ ಹೊಂದಲಿಲ್ಲ, ಆದಾಗ್ಯೂ ತಮ್ಮನ್ನು ಅಮಾನತ್ತುಗೊಳಿಸಲು ಶಿಫಾರಸ್ಸು ಮಾಡಿದ್ದು, ಈ ವಿಷಯದಲ್ಲಿ ತಾವು ನಿರ್ದೋಷಿ ಎಂದು ತಿಳಿಸುತ್ತಾ, ತಮ್ಮನ್ನು ಸೇವೆಗೆ ಪುನರ್ ನೇಮಕ ಮಾಡಲು ಕೋರಿರುತ್ತಾರೆ.

ಪ್ರಸ್ತುತ ಸರ್ಕಾರವು ಶ್ರೀ ರಾಮಪ್ಪ ಕಲ್ಲಪ್ಪ ನಿಂಗನೂರೆ, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಇವರ ಅಮಾನತ್ತನ್ನು ತೆರವುಗೊಳಿಸುವ ಬಗ್ಗೆ ಸ್ವೀಕೃತವಾದ ಮನವಿಯನ್ನು ಪರಿಶೀಲಿಸಿ, ಸದರಿಯವರ ವಿರುದ್ಧ ಇಲಾಖಾ ವಿಚಾರಣೆ/ ಕ್ರಿಮಿನಲ್ ಮೊಕದ್ದಮೆ ಬಾಕಿ ಇಟ್ಟು, ಅಮಾನತ್ತನ್ನು ತೆರವುಗೊಳಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಗ್ರಾಅಪ 18 ಇಎನ್‌ಕ್ಯೂ 08, ಬೆಂಗಳೂರು, ದಿನಾಂಕ: 30ನೇ ಜುಲೈ 2008.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಕರ್ನಾಟಕ ನಾಗರೀಕ ಸೇವೆ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮ –10ನೇ ನಿಯಮದ (5)ನೇ ಉಪ ನಿಯಮ (ಸಿ) ಪ್ರಕಾರ ಶ್ರೀ ರಾಮಪ್ಪ ಕಲ್ಲಪ್ಪ ನಿಂಗನೂರೆ, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಇವರ ಮೇಲೆ ಇಲಾಖಾ ವಿಚಾರಣೆ / ಕ್ರಿಮಿನಲ್ ಮೊಕದ್ದಮೆಯನ್ನು ಬಾಕಿ ಇಟ್ಟು, ಇವರ ಅಮಾನತ್ತನ್ನು ತಕ್ಷಣದಿಂದ ಜಾರಿಗೆ ಬರುವಂತೆ ತೆರವುಗೊಳಿಸಿ, ಸೇವೆಯಲ್ಲಿ ಪುನರ್ ಸ್ಥಾಪಿಸಿ ಆದೇಶಿಸಿದೆ.

ಶ್ರೀ ರಾಮಪ್ಪ ಕಲ್ಲಪ್ಪ ನಿಂಗನೂರೆ, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಇವರ ಸ್ಥಳ ನಿಯುಕ್ತಿ ಬಗ್ಗೆ ಪ್ರತ್ಯೇಕ ಆದೇಶ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1154

**ಎನ್.ವೈ. ಸಾಗರ**

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು–ಎ),

ಗ್ರಾಮೀಣಾಭಿವೃದ್ಧಿ ಮತ್ತು ಪಂ. ರಾಜ್ ಇಲಾಖೆ

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**ವಿಷಯ :** ರೇಷ್ಮೆ ಬಿತ್ತನೆಕೋಠಿ ನಾಗವಲ್ಲಿಗೆ ಸೇರಿದ ಹನುಮಂತಪುರದಲ್ಲಿರುವ ಚಿಟ್ಟೆ ಕೊರೆದ ಗೂಡು ಸಂಗ್ರಹಣಾ ಕೊಠಡಿಯನ್ನು ಅಂಗನವಾಡಿ ಕೇಂದ್ರಕ್ಕೆ ಬಿಟ್ಟುಕೊಡುವ ಬಗ್ಗೆ.

**ಓದಲಾಗಿದೆ:** 1. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು ಇವರ ಪತ್ರ ಸಂಖ್ಯೆ: ರೇಬೀರೇಕ್ಷೇ/ಪಿ1/ ನಾಗವಲ್ಲಿ/ಚಿಕೊಗೂ/ಸಂ/ಕೊ/15/07–08, ದಿನಾಂಕ 14–8–2007.

2. ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರ ಪತ್ರ ಸಂಖ್ಯೆ: ಡಿಡಬ್ಲ್ಯೂಸಿ/ ಐಸಿಡಿ/ಬಿಎಲ್‌ಡಿ/64/2007–08, ದಿ: 5–6–2008.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಮೈಸೂರು ಬಿತ್ತನೆ ವಲಯದ ಪಿ1 ಬಿತ್ತನೆಕೋಠಿ ನಾಗವಲ್ಲಿಗೆ ಸೇರಿದ ಹನುಮಂತಪುರ ಗ್ರಾಮದಲ್ಲಿರುವ ಚಿಟ್ಟೆ ಕೊರೆದ ಗೂಡು ಸಂಗ್ರಹಣಾ ಕೊಠಡಿಯನ್ನು ಅದೇ ಗ್ರಾಮದಲ್ಲಿರುವ ಅಂಗನವಾಡಿ ಕೇಂದ್ರಕ್ಕೆ ಬಿಟ್ಟುಕೊಡುವಂತೆ ಸದರಿ ಅಂಗನವಾಡಿಯ ಕಾರ್ಯಕರ್ತೆ ಕೋರಿದ್ದರಿಂದ ಸದರಿ ಕೊಠಡಿಯನ್ನು ಅಂಗನವಾಡಿ ಕೇಂದ್ರಕ್ಕೆ ಬಿಟ್ಟುಕೊಡುವಂತೆ ಶಾಸಕರು, ಕುಣಿಗಲ್ ಕ್ಷೇತ್ರ ಇವರು ಕೋರಿರುವುದಾಗಿ ತಿಳಿಸಿ, ಸದರಿ ಚಿಟ್ಟೆ ಕೊರೆದ ಗೂಡು ಸಂಗ್ರಹಣಾ ಕೊಠಡಿಯನ್ನು ಸಧ್ಯಕ್ಕೆ ಇಲಾಖೆಯು ಉಪಯೋಗಿಸಿದೇ ಇರುವುದರಿಂದ ಇಲಾಖೆಗೆ ಅವಶ್ಯಕತೆ ಬಂದಾಗ ಮರಳಿಸುವ ನಿಬಂಧನೆಯ ಮೇರೆಗೆ ಅಂಗನವಾಡಿ ಕೇಂದ್ರಕ್ಕೆ ಬಿಟ್ಟುಕೊಡಬಹುದಾಗಿದೆ ಎಂದು ಜಂಟಿ ನಿರ್ದೇಶಕರು, ಬಿಳಿದೇವಾಲಯ ಇವರು ತಿಳಿಸಿರುವುದರಿಂದ ಹನುಮಂತಪುರ ಗ್ರಾಮದಲ್ಲಿರುವ ಚಿಟ್ಟೆಕೊರೆದ ಗೂಡು ಸಂಗ್ರಹಣಾ ಕೊಠಡಿಯನ್ನು ಇಲಾಖೆಗೆ ಅವಶ್ಯಕತೆ ಬಂದಾಗ ಮರಳಿಸುವ ನಿಬಂಧನೆಗೆ ಮೇರೆಗೆ ಅಂಗನವಾಡಿ ಕೇಂದ್ರಕ್ಕೆ ಬಿಟ್ಟುಕೊಡುವುದಕ್ಕೆ ಸರ್ಕಾರದ ಅನುಮತಿ ಕೋರಿರುತ್ತಾರೆ.

ಖಾಲಿ ಇರುವ ಸರ್ಕಾರಿ ಬಿತ್ತನೆ ಕೋಠಡಿ ನಾಗವಲ್ಲಿ ಇಲ್ಲಿಗೆ ಸೇರಿದ, ಹನುಮಂತಪುರದಲ್ಲಿರುವ ಚಿಟ್ಟೆಕೊರೆದ ಗೂಡು ಸಂಗ್ರಹಣಾ ಕೊಠಡಿಯನ್ನು ಅಂಗನವಾಡಿ ಕೇಂದ್ರ ನಡೆಸಲು ತಾತ್ಕಾಲಿಕವಾಗಿ ಉಚಿತವಾಗಿ ನೀಡುವಂತೆ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಕಲ್ಯಾಣ ಅಭಿವೃದ್ಧಿ ಇಲಾಖೆ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಸರ್ಕಾರವನ್ನು ಕೋರಿರುತ್ತಾರೆ.

ವಿಷಯವನ್ನು ಪರಿಶೀಲಿಸಲಾಗಿದ್ದು ರೇಷ್ಮೆ ಬಿತ್ತನೆಕೋಠಿ ನಾಗವಲ್ಲಿಗೆ ಸೇರಿದ ಹನುಮಂತಪುರದಲ್ಲಿರುವ ಚಿಟ್ಟೆ ಕೊರೆದ ಗೂಡು ಸಂಗ್ರಹಣಾ ಕೊಠಡಿಯು ಖಾಲಿ ಇದ್ದು ಸಧ್ಯ ಇಲಾಖೆಯು ಉಪಯೋಗಿಸದೇ ಇರುವುದರಿಂದ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಕೋರಿರುವಂತೆ ಅಂಗನವಾಡಿ ಕೇಂದ್ರ ನಡೆಸುವುದಾಗಿ ನೀಡಲು ತೀರ್ಮಾನಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 54 ರೇಯೋವಿ 2007, ಬೆಂಗಳೂರು, ದಿನಾಂಕ: 31ನೇ ಜುಲೈ 2008.**

ರೇಷ್ಮೆ ಬಿತ್ತನೆಕೋಠಿ ನಾಗವಲ್ಲಿಗೆ ಸೇರಿದ ಹನುಮಂತಪುರದಲ್ಲಿರುವ ಚಿಟ್ಟೆಕೊರೆದ ಗೂಡು ಸಂಗ್ರಹಣಾ ಕೊಠಡಿಯನ್ನು ಅಂಗನವಾಡಿ ಕೇಂದ್ರ ನಡೆಸುವುದಕ್ಕಾಗಿ ಸರ್ಕಾರಿ ಪತ್ರ ಸಂಖ್ಯೆ ವಾಕೈ 27 ರೇಯೋವಿ 2007, ದಿನಾಂಕ 24–5–2008ರಲ್ಲಿ ಸೂಚಿಸಿರುವ ಮಾರ್ಗಸೂಚಿ, ಕರಾರು ಒಪ್ಪಂದ, ಷರತ್ತು ಮತ್ತು ನಿಬಂಧನೆಗಳನ್ವಯ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಗೆ ತಾತ್ಕಾಲಿಕವಾಗಿ ನೀಡುವುದಕ್ಕೆ ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1148

**ಭಾರತಿ ಆರ್. ನಾಯಕ್**

ಪೀಠಾಧಿಕಾರಿ (ರೇಷ್ಮೆ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ಸಂಖ್ಯೆ: ಆಕುಕ 1 ಎಂಎಸ್‌ಎಫ್ 2008, ಬೆಂಗಳೂರು, ದಿನಾಂಕ: 29ನೇ ಜುಲೈ 2008.**

**ತಿದ್ದುಪಡಿ**

ಸರ್ಕಾರಿ ಆದೇಶ ಸಂಖ್ಯೆ: ಆಕುಕ 1 ಎಂಎಸ್‌ಎಫ್ 2008, ದಿನಾಂಕ 9–6–2008ರ ಆದೇಶ ಭಾಗದ ಪುಟ 3ರಲ್ಲಿ "ಸ್ಟೈಪಂಡರಿ ಆಧಾರದ ಮೇಲೆ ಎಂಬ ಪದಗಳ ನಂತರದ "ನೇಮಕಗೊಂಡಿರುವ ನೌಕರರಿಂದ" ಎಂಬ ಪದಗಳನ್ನು "ನೇಮಿಸಿಕೊಂಡು" ಎಂದು ತಿದ್ದಿಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1165

**ವಿ. ಶ್ರೀರಾಮರೆಡ್ಡಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

(ವೈದ್ಯಕೀಯ ಶಿಕ್ಷಣ)

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ :** ಭಾರತ ಸ್ವಾತಂತ್ರ್ಯ ಸಂಗ್ರಾಮದ 150ನೇ ವರ್ಷಾಚರಣೆ ಹಾಗೂ ಟಿಪ್ಪು ಸುಲ್ತಾನರ ಸ್ಮರಣಾರ್ಥ ಕಾರ್ಯಕ್ರಮಗಳನ್ನು ರಾಜ್ಯದಲ್ಲಿ ಹಮ್ಮಿಕೊಳ್ಳುವ ಬಗ್ಗೆ.

**ಓದಲಾಗಿದೆ:**

1. ಭಾರತ ಸರ್ಕಾರದ ಮಾನ್ಯ ಮಾನವ ಸಂಪನ್ಮೂಲ ಮತ್ತು ಅಭಿವೃದ್ಧಿ ಸಚಿವರು ಕರ್ನಾಟಕ ರಾಜ್ಯದ ಮುಖ್ಯಮಂತ್ರಿಯವರಿಗೆ ಬರೆದಿರುವ ದಿನಾಂಕ 23–2–2007ರ ಪತ್ರ ಸಂಖ್ಯೆ: 467/ಎಂ/ಹೆಚ್.ಆರ್.ಡಿ./ವಿ.ಐ.ಪಿ./2007.
2. ಭಾರತ ಸರ್ಕಾರದ ಕಾರ್ಯದರ್ಶಿಗಳು, ಸಂಸ್ಕೃತಿ ಮಂತ್ರಾಲಯ, ನವದೆಹಲಿ ಇವರ ದಿನಾಂಕ 20–3–2007ರ ಅ.ಸ. ಪತ್ರ ಸಂಖ್ಯೆ 1–25/2007–ವಿಶೇಷ ಕೋಶ.
3. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 15 ರಾರಾಅ 2007, ದಿನಾಂಕ 16–5–2007.
4. ಮುಖ್ಯ ಕಾರ್ಯದರ್ಶಿಗಳು, ಕರ್ನಾಟಕ ಸರ್ಕಾರ ರವರು ಭಾರತ ಸರ್ಕಾರದ ಕಾರ್ಯದರ್ಶಿ, ಸಂಸ್ಕೃತಿ ಮಂತ್ರಾಲಯ, ನವದೆಹಲಿ ಇವರಿಗೆ ಬರೆದ ಪತ್ರ ಸಂಖ್ಯೆ: ಕಸಂವಾಪ್ರ 92 ಕೆಎಂಯು 2007, ದಿನಾಂಕ 5–7–2007.
5. ಅಂದಿನ ಮಾನ್ಯ ಕನ್ನಡ ಮತ್ತು ಸಂಸ್ಕೃತಿ ಸಚಿವರ ಅಧ್ಯಕ್ಷತೆಯಲ್ಲಿ ದಿನಾಂಕ 1–8–2007ರಂದು ನಡೆದ ಉನ್ನತ ಮಟ್ಟದ ಸಮಿತಿಯ ಸಭೆ ತೀರ್ಮಾನ.
6. ಮುಖ್ಯ ಕಾರ್ಯದರ್ಶಿಗಳು, ಕರ್ನಾಟಕ ಸರ್ಕಾರ ರವರ ಅಧ್ಯಕ್ಷತೆಯಲ್ಲಿ ದಿನಾಂಕ 9–8–2007ರಂದು ನಡೆದ ರಾಜ್ಯ ಮಟ್ಟದ ಅನುಷ್ಠಾನ ಸಮಿತಿ (ಉಪಸಮಿತಿ) ಸಭೆಯ ತೀರ್ಮಾನ.
7. ಭಾರತ ಸರ್ಕಾರದ ಸಂಸ್ಕೃತಿ ಮಂತ್ರಾಲಯ ಇವರ ದಿನಾಂಕ 24–3–2008ರ ಪತ್ರ ಸಂಖ್ಯೆ: ಎಫ್.1–25/2007. ವಿಶೇಷ ಕೋಶ.
8. ದಿನಾಂಕ 18–6–2008ರಂದು ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ತೀರ್ಮಾನ.
9. ಮಾನ್ಯ ಗೃಹ ಸಚಿವರ ಅಧ್ಯಕ್ಷತೆಯಲ್ಲಿ ದಿನಾಂಕ 30–7–2008ರಂದು ನಡೆದ ಉನ್ನತ ಮಟ್ಟದ ಸಮಿತಿ ಸಭೆಯ ತೀರ್ಮಾನಗಳು.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಪತ್ರದಲ್ಲಿ ಮಾನ್ಯ ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವರು, ಭಾರತ ಸರ್ಕಾರ ಇವರು ಮಾನ್ಯ ಮುಖ್ಯಮಂತ್ರಿಗಳು, ಕರ್ನಾಟಕ ಸರ್ಕಾರ ಇವರಿಗೆ ಪತ್ರ ಬರೆದು ಭಾರತ ಸ್ವಾತಂತ್ರ್ಯ ಸಂಗ್ರಾಮದ 150ನೇ ವಾರ್ಷಿಕೋತ್ಸವ ಹಾಗೂ 60ನೇ ವರ್ಷದ ಸ್ವಾತಂತ್ರ್ಯೋತ್ಸವ ಆಚರಿಸಲು ತೀರ್ಮಾನಿಸಿದ ಬಗ್ಗೆ ತಿಳಿಸಿ ರಾಜ್ಯ ಮಟ್ಟದ ಉನ್ನತ ಸಮಿತಿಗಳನ್ನು ರಚಿಸಿ ರಾಜ್ಯ ಸರ್ಕಾರದಿಂದ ಕಾರ್ಯಕ್ರಮ ಹಮ್ಮಿಕೊಳ್ಳಲು ತಿಳಿಸಿರುವರು.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಭಾರತ ಸರ್ಕಾರದ ಕಾರ್ಯದರ್ಶಿಗಳು, ಸಂಸ್ಕೃತಿ ಮಂತ್ರಾಲಯ, ನವದೆಹಲಿ ಇವರು ಮುಖ್ಯಕಾರ್ಯದರ್ಶಿ, ಕರ್ನಾಟಕ ಸರ್ಕಾರ ಇವರಿಗೆ ಪತ್ರ ಬರೆದು ದಿನಾಂಕ 6–3–2007ರಂದು ನಡೆದ ರಾಷ್ಟ್ರೀಯ ಅನುಷ್ಠಾನ ಸಮಿತಿ ಸಭೆಯ ತೀರ್ಮಾನದಂತೆ ಕರ್ನಾಟಕದಲ್ಲಿ ಭಾರತ ಸ್ವಾತಂತ್ರ್ಯ ಸಂಗ್ರಾಮದ 150ನೇ ವರ್ಷಾಚರಣೆಯಲ್ಲಿ ಸಂದರ್ಭೋಚಿತವಾಗಿ ಟಿಪ್ಪುಸುಲ್ತಾನರ ಸ್ಮರಣಾರ್ಥ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲು ತೀರ್ಮಾನಿಸಲಾಗಿದೆ ಎಂದು ತಿಳಿಸಿರುವರು.

ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಉದ್ದೇಶಿತ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲು ಮಾನ್ಯ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ರಾಜ್ಯ ಮಟ್ಟದ ಸಮಿತಿಯನ್ನು ಹಾಗೂ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ರಾಜ್ಯಮಟ್ಟದ ಅನುಷ್ಠಾನ ಸಮಿತಿ (ಉಪಸಮಿತಿ)ಗಳನ್ನು ರಚಿಸಿ ಆದೇಶಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (4)ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ಕಾರ್ಯದರ್ಶಿಗಳು, ಭಾರತ ಸರ್ಕಾರದ ಕಾರ್ಯದರ್ಶಿ, ಸಂಸ್ಕೃತಿ ಮಂತ್ರಾಲಯ, ನವದೆಹಲಿ ಇವರಿಗೆ ಪತ್ರ ಬರೆದು ಭಾರತ ಸ್ವಾತಂತ್ರ್ಯ ಸಂಗ್ರಾಮದ 150ನೇ ವಾರ್ಷಿಕೋತ್ಸವ ಹಾಗೂ 60ನೇ ವರ್ಷದ ಸ್ವಾತಂತ್ರ್ಯೋತ್ಸವ ಆಚರಿಸಲು ತನ್ನಿಮ್ಮಿತ್ತ ಹಮ್ಮಿಕೊಳ್ಳಲಾದ ಕಾರ್ಯಕ್ರಮಗಳು ಮತ್ತು ಅದಕ್ಕೆ ತಗಲುವ ವೆಚ್ಚಗಳ ಮಾಹಿತಿಯೊಂದಿಗೆ ಪತ್ರ ಬರೆದಿರುವರು.

ಮೇಲೆ ಕ್ರಮ ಸಂಖ್ಯೆ (5)ರಲ್ಲಿ ಓದಲಾದ ಸಭೆಯಲ್ಲಿ ಮಾನ್ಯ ಮುಖ್ಯಮಂತ್ರಿಗಳ ಪರವಾಗಿ ಮಾನ್ಯ ಕನ್ನಡ ಮತ್ತು ಸಂಸ್ಕೃತಿ ಸಚಿವರ ಅಧ್ಯಕ್ಷತೆಯಲ್ಲಿ ಸಭೆ ನಡೆದು ಈ ಕಾರ್ಯಕ್ರಮ ಹಮ್ಮಿಕೊಳ್ಳುವ ಬಗ್ಗೆ ಮತ್ತು ಅದರಲ್ಲಿನ ಕಾರ್ಯಕ್ರಮಗಳ ರೂಪುರೇಷೆಗಳನ್ನು ತಯಾರಿಸಲಾಯಿತು.

ಮೇಲೆ ಕ್ರಮ ಸಂಖ್ಯೆ (6)ರಲ್ಲಿ ಓದಲಾದ, ಮಾನ್ಯ ಮುಖ್ಯಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ದಿನಾಂಕ 9–8–2007ರಂದು ನಡೆದ ರಾಜ್ಯ ಮಟ್ಟದ ಅನುಷ್ಠಾನ ಸಮಿತಿ (ಉಪಸಮಿತಿ)ಯಲ್ಲಿ ಸಮಾರಂಭದ ಆಚರಣೆ ಬಗ್ಗೆ ಹಾಗೂ ಕೈಗೊಳ್ಳಬೇಕಾದ ಕಾರ್ಯಕ್ರಮಗಳ ರೂಪುರೇಷೆಗಳನ್ನು ತಯಾರಿಸಿ ಅನುಷ್ಠಾನಗೊಳಿಸಲು ತೀರ್ಮಾನಿಸಲಾಯಿತು.

ಮೇಲೆ ಕ್ರಮ ಸಂಖ್ಯೆ (7)ರಲ್ಲಿ ಓದಲಾದ ಭಾರತ ಸರ್ಕಾರದ ಪತ್ರದಲ್ಲಿ ಭಾರತ ಸ್ವಾತಂತ್ರ್ಯ ಸಂಗ್ರಾಮದ 150ನೇ ವಾರ್ಷಿಕೋತ್ಸವ ಹಾಗೂ 60ನೇ ವರ್ಷದ ಸ್ವಾತಂತ್ರ್ಯೋತ್ಸವ ಆಚರಿಸಲು ಹಾಗೂ ಹಮ್ಮಿಕೊಳ್ಳಬೇಕಾದ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ರೂ. 2.50 ಕೋಟಿ (ರೂಪಾಯಿ ಎರಡು ಕೋಟಿ ಐವತ್ತು ಸಾವಿರಗಳು ಮಾತ್ರ) ಹಣವನ್ನು ಮಂಜೂರು ಮಾಡಿ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಇವರ ಬ್ಯಾಂಕ್ ಖಾತೆ ಸಂಖ್ಯೆ 64014304893 ಎಂ.ಐ.ಸಿ.ಆರ್. ಕೋಡ್ ಸಂಖ್ಯೆ 56000623, ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಜೆ.ಸಿ. ರಸ್ತೆ, ಬೆಂಗಳೂರು ಈ ಬಾಬ್ತಿನಲ್ಲಿ ಹಣ ಮಂಜೂರು ಮಾಡಿ ಆದೇಶಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (8)ರಲ್ಲಿ ಓದಲಾದ, ದಿನಾಂಕ 18–6–2008ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ ರವರ ಅಧ್ಯಕ್ಷತೆಯಲ್ಲಿ ಸಭೆ ನಡೆದು ಭಾರತ ಸ್ವಾತಂತ್ರ್ಯ ಸಂಗ್ರಾಮದ 150ನೇ ವಾರ್ಷಿಕೋತ್ಸವ ಹಾಗೂ ಟಿಪ್ಪು ಸುಲ್ತಾನರ ಸ್ಮರಣಾರ್ಥ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ಭಾರತ ಸರ್ಕಾರದಿಂದ ಮಂಜೂರು ಮಾಡಲಾದ ರೂ. 2.50 ಕೋಟಿ ಹಣವನ್ನು ಕ್ಷೇತ್ರೀಯ ಇಲಾಖೆಗಳಿಗೆ ಅವರು ಹಮ್ಮಿಕೊಳ್ಳುವ ಕಾರ್ಯಕ್ರಮಗಳಿಗೆ ತಕ್ಕಂತೆ ಹಣವನ್ನು ವಿಂಗಡಿಸಿ ಹಂಚಿಕೆ ಮಾಡಿ ಕಾರ್ಯಕ್ರಮಗಳನ್ನು ಸೂಕ್ತ ಮತ್ತು ವ್ಯವಸ್ಥಿತವಾಗಿ ಕಾರ್ಯಗತಗೊಳಿಸುವಂತೆ ತಿಳಿಸಲು ತೀರ್ಮಾನಿಸಲಾಯಿತು. ಅಲ್ಲದೆ ಕಾರ್ಯಕ್ರಮಗಳನ್ನು ಈ ಮೊದಲು ಮೇ 2008ರಲ್ಲಿ ಹಮ್ಮಿಕೊಳ್ಳಲು ಸೂಚಿಸಿದ್ದು, ಆಗ ರಾಜ್ಯದಲ್ಲಿ ವಿಧಾನಸಭೆಗೆ ಚುನಾವಣೆ ಪ್ರಕ್ರಿಯೆಗಳು ನಡೆಯುತ್ತಿದ್ದುದರಿಂದ ಉದ್ದೇಶಿತ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲಾಗಿರುವುದಿಲ್ಲವಾದ್ದರಿಂದ ಸದರಿ ಕಾರ್ಯಕ್ರಮಗಳನ್ನು 2008ರ ಆಗಸ್ಟ್ 14 ರಿಂದ 17ನೇ ದಿನಾಂಕಗಳಂದು ನಡೆಸಲು ಸಹ ತೀರ್ಮಾನಿಸಿ ಭಾರತ ಸರ್ಕಾರಕ್ಕೆ ಪತ್ರವನ್ನು ಬರೆಯಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (9)ರಲ್ಲಿ ರಾಜ್ಯ ಮಟ್ಟದ ಸಮಿತಿಯು ಮಾನ್ಯ ಮುಖ್ಯಮಂತ್ರಿಗಳ ಪರವಾಗಿ ಮಾನ್ಯ ಗೃಹ ಸಚಿವರ ಅಧ್ಯಕ್ಷತೆಯಲ್ಲಿ ದಿನಾಂಕ 30–7–2008ರಂದು ಜರುಗಿ ದಿನಾಂಕ 18–6–2008ರಂದು ನಡೆದ ಸಭೆಯ ನಡವಳಿಗಳ ರೀತ್ಯಾ ಹಣ ಮಂಜೂರು ಮಾಡಿ ಕಾರ್ಯಕ್ರಮಗಳನ್ನು ಯಶಸ್ವಿಯಾಗಿ ನಡೆಸಲು ಅನುಮೋದನೆ ನೀಡಿತು. ಅದರಂತೆ ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಸಂಬಂಧಪಟ್ಟ ಕ್ಷೇತ್ರೀಯ ಇಲಾಖೆಗಳಿಗೆ ಕಾರ್ಯಕ್ರಮಗಳನ್ನು ಯಶಸ್ವಿಯಾಗಿ ಅನುಷ್ಠಾನಗೊಳಿಸಲು ಹಣ ಮಂಜೂರು ಮಾಡಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 92 ಕೆಎಂಯು 2007 ಬೆಂಗಳೂರು, ದಿನಾಂಕ: 2ನೇ ಆಗಸ್ಟ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಭಾರತ ಸ್ವಾತಂತ್ರ್ಯ ಸಂಗ್ರಾಮದ 150ನೇ ವಾರ್ಷಿಕೋತ್ಸವ ಹಾಗೂ ಟಿಪ್ಪುಸುಲ್ತಾನ್ ಸ್ಮರಣಾರ್ಥ ಕಾರ್ಯಕ್ರಮಗಳನ್ನು ಆಚರಿಸಲು ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಸಂಬಂಧಪಟ್ಟ ಕ್ಷೇತ್ರೀಯ ಇಲಾಖೆಗಳಿಗೆ ಇದರೊಂದಿಗೆ ಲಗತ್ತಿಸಿರುವ ಅನುಬಂಧ–1ರಲ್ಲಿರುವಂತೆ ಹಣ ಮಂಜೂರಾತಿ ಮಾಡಿ ಆದೇಶಿಸಿದೆ. ಮಂಜೂರಾದ ರೂ. 2.50 ಕೋಟಿ ಹಣವು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರ ಪಿ.ಡಿ. ಖಾತೆಯಲ್ಲಿ ಜಮೆಯಾಗಿದ್ದು ಅನುಬಂಧ–1ರಲ್ಲಿ ಇಲಾಖೆಗಳಿಗೆ ಈ ಕೆಳಕಂಡ ಷರತ್ತಿಗೊಳಪಟ್ಟು, ಹಂಚಿಕೆ ಮಾಡಿರುವಂತೆ ಹಣ ಬಿಡುಗಡೆ ಮಾಡಲು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು ಇವರಿಗೆ ಈ ಮೂಲಕ ಆದೇಶಿಸಲಾಗಿದೆ.

1. ಯಾವ ಕಾರ್ಯಕ್ರಮಗಳಿಗೆ ಹಣವನ್ನು ಮಂಜೂರು ಮಾಡಿದೆಯೋ ಆ ಕಾರ್ಯಕ್ರಮಗಳಿಗೆ ಮಾತ್ರ ಹಣ ಉಪಯೋಗಿಸತಕ್ಕದ್ದು. ಉದ್ದೇಶಿತ ಕಾರ್ಯಗಳ ಹೊರತಾಗಿ ಬೇರೆ ಕಾರ್ಯಕ್ರಮಗಳಿಗೆ ಹಣವನ್ನು ಉಪಯೋಗಿಸತಕ್ಕದ್ದಲ್ಲ. ಕಾರ್ಯಕ್ರಮಗಳನ್ನು ಆಯಾ ಜಿಲ್ಲಾಧಿಕಾರಿಗಳ ಸಹಕಾರದೊಂದಿಗೆ ನಡೆಸುವುದು.
2. ಕಾಮಗಾರಿ ಮತ್ತು ಬೃಹತ್ ಕೆಲಸಗಳಿಗಾಗಿ ಬಳಸುವ ಮೊತ್ತ ರೂ. 1.00 ಲಕ್ಷಕ್ಕಿಂತ ಹೆಚ್ಚಾದಲ್ಲಿ ಪಾರದರ್ಶಕ ಕಾಯ್ದೆ (ಕೆ.ಟಿ.ಪಿ.ಪಿ.) ಪ್ರಕಾರ ಕ್ರಮ ಕೈಗೊಳ್ಳುವುದು.
3. ಈ ಉದ್ದೇಶಕ್ಕೆ ಖರ್ಚಾದ ಹಣವನ್ನು ಅರ್ಹ ಆಡಿಟ್ ರವರಿಂದ ಪರಿಶೀಲಿಸಿ ಎಲ್ಲಾ ವಿವರಗಳೊಂದಿಗೆ ಬಳಕೆ ಪ್ರಮಾಣ ಪತ್ರವನ್ನು ಸಹ ಸರ್ಕಾರಕ್ಕೆ ದ್ವಿಪ್ರತಿಯಲ್ಲಿ ಸಲ್ಲಿಸುವುದು.
4. ಕೇಂದ್ರ ಸರ್ಕಾರಕ್ಕೆ ಒಟ್ಟು ರೂ. 2.50 ಕೋಟಿ ಹಣ ಖರ್ಚಾಗಿರುವ ಬಗ್ಗೆ ಪೂರ್ಣ ಪ್ರಮಾಣದ ವಿವರಗಳನ್ನು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ರವರು ಕ್ರೋಢೀಕರಿಸಿ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ಧರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

(ಆಡಳಿತ ಕನ್ನಡ)

**ಸರ್ಕಾರಿ ಆದೇಶ ಸಂಖ್ಯೆ ಕಸಂವಾಪ್ರ 92 ಕೆಎಂಯು 2007, ದಿನಾಂಕ 2ನೇ ಆಗಸ್ಟ್ 2008**

**ಅನುಬಂಧ–1**

| | | |
|---|---|---|
| 1) | **ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ :** ಇಲಾಖೆಯು ಸ್ವಾತಂತ್ರ್ಯ ದಿನಾಚರಣೆಯ ಹಿಂದಿನ ದಿನ ಅಂದರೆ 14–8–2008 ರಂದು ಸಂಜೆ 5.30ಕ್ಕೆ ರವೀಂದ್ರ ಕಲಾಕ್ಷೇತ್ರದಲ್ಲಿ ಉದ್ಘಾಟನಾ ಸಮಾರಂಭ ಕಾರ್ಯಕ್ರಮ ಹಮ್ಮಿಕೊಳ್ಳುವುದು. ಇದಕ್ಕೆ ಸಂಬಂಧಪಟ್ಟಂತೆ ಸಾಂಸ್ಕೃತಿಕ ಕಾರ್ಯಕ್ರಮ ಹಮ್ಮಿಕೊಳ್ಳುವುದು. ಟಿಪ್ಪು ಕುರಿತು ನೃತ್ಯರೂಪಕ/ಜಾನಪದ ಗೀತೆಗಳು, ನಾಟಕ ಉತ್ಸವ ಏರ್ಪಡಿಸುವುದು. ತುಮಕೂರು ಜಿಲ್ಲಾಧಿಕಾರಿಗಳಾಗಿದ್ದ ಶ್ರೀ ಉಮಾಶಂಕರ್ ಇವರಿಂದ ಪ್ರಭಾತ್ ಕಲಾವಿದರ ಮಾಹಿತಿ ಪಡೆದು ಕರ್ನಾಟಕ ವೈಭವ ನೃತ್ಯರೂಪಕ ಕಾರ್ಯಕ್ರಮವನ್ನು ಎಲ್ಲಾ ಜಿಲ್ಲೆಗಳಲ್ಲೂ ಹಮ್ಮಿಕೊಳ್ಳುವುದು. ಅಲ್ಲದೆ ವಿಭಾಗ ಮಟ್ಟದಲ್ಲಿ ಬೆಳಗಾವಿ, ಗುಲ್ಬರ್ಗಾ ಮತ್ತು ಮಂಗಳೂರು ಜಿಲ್ಲೆಗಳಲ್ಲಿ ಆಚರಣೆಯ ನಿಮಿತ್ತ ಕಾರ್ಯಕ್ರಮ ಹಮ್ಮಿಕೊಳ್ಳಲು ಕ್ರಮ ಕೈಗೊಳ್ಳುವುದು. ಕಾರ್ಯಕ್ರಮದ ಸಮಾರೋಪ ಸಮಾರಂಭವನ್ನು ಮೈಸೂರಿನಲ್ಲಿ ದಿನಾಂಕ 17–8–2008 ರಂದು ಸಂಜೆ ಹಮ್ಮಿಕೊಳ್ಳುವುದು. | ರೂ. 33.00 ಲಕ್ಷ |
| 2) | **ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಬೆಂಗಳೂರು :** ಶ್ರೀರಂಗಪಟ್ಟಣದಲ್ಲಿರುವ ಟಿಪ್ಪು ಸುಲ್ತಾನರ ಕೋಟೆಯ ಸಂರಕ್ಷಣೆ ಮತ್ತು ದುರಸ್ತಿ ಕಾಮಗಾರಿ, ಟಿಪ್ಪು ಸುಲ್ತಾನರ ಶಸ್ತ್ರಾಗಾರ ಸಂರಕ್ಷಣೆ, ವಿದ್ಯಾರ್ಥಿಗಳಿಂದ ಆರ್ಟ್‌ಕ್ಯಾಂಪ್ ಮತ್ತು ಪಾರಂಪರಿಕ ನಡಿಗೆ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು. ಕಾರ್ಯಕ್ರಮಗಳನ್ನು 2008ರ ಆಗಸ್ಟ್ 15, 16 ಮತ್ತು 17ರಂದು ನಡೆಸುವುದು. | ರೂ. 53.00 ಲಕ್ಷ |

| | | |
|---|---|---|
| 3) | **ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು :** ಈ ಇಲಾಖೆಯು ಮುಖ್ಯವಾಗಿ ಅಂತರಾಷ್ಟ್ರೀಯ ಮಟ್ಟದ ವಿಚಾರ ಸಂಕಿರಣವನ್ನು ಮೈಸೂರಿನಲ್ಲಿ ಏರ್ಪಡಿಸುವುದು. ಶ್ರೀರಂಗಪಟ್ಟಣ ಹಾಗೂ ವೆಂಕಟಪ್ಪ ಚಿತ್ರಶಾಲೆಯಲ್ಲಿ ಹೈದರಾಲಿ ಮತ್ತು ಟಿಪ್ಪುಸುಲ್ತಾನರ ಕಾಲದ ನಾಣ್ಯಗಳ ಮತ್ತು ಪ್ರಾಚ್ಯವಸ್ತು ಮೌಲ್ಯಗಳುಳ್ಳಂಥಹ ವಸ್ತುಗಳ ಪ್ರದರ್ಶನ ಏರ್ಪಡಿಸುವುದು. | ರೂ. 12.00 ಲಕ್ಷ |
| 4) | **ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು :** ಈ ಇಲಾಖೆಯು ಹೈದರಾಲಿ ಮತ್ತು ಟಿಪ್ಪು ಸುಲ್ತಾನರ ಕಾಲದ ಪ್ರಮುಖವಾದ ದಾಖಲೆಗಳು, ಅತ್ಯಮೂಲ್ಯವಾದ ಪುಸ್ತಕಗಳು ಮತ್ತು ಐತಿಹಾಸಿಕ ದಾಖಲೆಗಳ ಪ್ರದರ್ಶನವನ್ನು ಶ್ರೀರಂಪಟ್ಟಣ ಮತ್ತು ಬೆಂಗಳೂರಿನ ವೆಂಕಟಪ್ಪ ಚಿತ್ರಶಾಲೆಯಲ್ಲಿ ಏರ್ಪಡಿಸುವುದು. | ರೂ. 5.00 ಲಕ್ಷ |
| 5) | **ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು :** ಗ್ಯಾಸೆಟಿಯರ್ ಇಲಾಖೆಯು ಟಿಪ್ಪು ಸುಲ್ತಾನರ ಬಗ್ಗೆ ಸಮಗ್ರವಾದ ಬಹುವರ್ಣೀಯ ಗ್ರಂಥವನ್ನು ಪ್ಯಾರೀಸ್‌ನ, ಲಂಡನ್ ಪತ್ರಾಗಾರದಲ್ಲಿ ಲಭ್ಯವಿರುವ ಫ್ರೆಂಚ್ ದಾಖಲೆಗಳನ್ನು ಹಾಗೂ ಈವರೆಗೆ ಪ್ರಕಟವಾಗಿರುವ ಕೃತಿಗಳನ್ನು ಆಧರಿಸಿ ಪ್ರಸಿದ್ಧ ಇತಿಹಾಸಕಾರರಾದ ಡಾ॥ ವಸುಂಧರಾ ಫಿಲಿಯೋಜಾ. ಅವರಿಂದ ರಚಿಸಿ ಪ್ರಕಟಿಸುವುದು. ಹಾಗೂ ಈ ಸಮಗ್ರ ಮಾಹಿತಿಯುಳ್ಳ ಗ್ರಂಥವನ್ನು ಮುಖ್ಯ ಸಂಪಾದಕರ ಅಧ್ಯಕ್ಷತೆಯಲ್ಲಿ ತಜ್ಞರ ಸಮಿತಿಯನ್ನು ರಚಿಸುವುದು. ಡಾ॥ ಜಿ.ಎಸ್. ಶಿವರುದ್ರಪ್ಪ, ಪ್ರೊ॥ ಬಿ. ಶೇಖ್ ಆಲಿ, ಪ್ರೊ॥ ಕೆ.ಎಸ್. ನಿಸಾರ್ ಅಹಮದ್, ಶ್ರೀ ತಲಕಾಡು ಚಿಕ್ಕರಂಗೇಗೌಡ ಅವರನ್ನು ಸಮಿತಿಯ ಸದಸ್ಯರನ್ನಾಗಿ ನೇಮಿಸುವುದು. ಸದರಿ ಸಮಿತಿಗೆ ಡಾ॥ ಆರ್. ಗೋಪಾಲ್, ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಶ್ರೀ ವಿ.ಎ. ಮಾಚಕನೂರ್, ಆಯುಕ್ತರು, ಪರಂಪರೆ ಇಲಾಖೆ ಮತ್ತು ಶ್ರೀ ಮನು ಬಳಿಗಾರ್, ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರನ್ನು ಸಲಹೆ/ಸೂಚನೆ ನೀಡಲು ಸದಸ್ಯರನ್ನಾಗಿ ನೇಮಿಸುವುದು. ಯುವಪೀಳಿಗೆಗೆ ಮಾರ್ಗದರ್ಶನ ಮತ್ತು ಸ್ಫೂರ್ತಿದಾಯಕವಾದಂತಹ ದಾಖಲಾತಿಗಳನ್ನೊಳಗೊಂಡಂತೆ ಪುಸ್ತಕ ರಚಿಸಲು ಕ್ರಮ ವಹಿಸುವುದು. ಈ ಗ್ರಂಥ ರಚನೆಯನ್ನು ಗರಿಷ್ಠ 6 ತಿಂಗಳ ಕಾಲಮಿತಿಯಲ್ಲಿ ಪೂರ್ಣಗೊಳಿಸುವುದು. | ರೂ. 10.00 ಲಕ್ಷ |
| 6) | **ವಾರ್ತಾ ಇಲಾಖೆ :** ವಾತಾ ಇಲಾಖೆಯು ಕಾರ್ಯಕ್ರಮದ ಬಗ್ಗೆ ಪ್ರಮುಖ ದಿನಪತ್ರಿಕೆಗಳಲ್ಲಿ ಜಾಹೀರಾತು ನೀಡುವುದು. ಟಿಪ್ಪುಸುಲ್ತಾನರ ಜೀವನ ಚರಿತ್ರೆ ಕುರಿತು ಸಾಕ್ಷ್ಯಚಿತ್ರ ತಯಾರಿಸುವುದು. ಅಲ್ಲದೆ ಪತ್ರಾಗಾರ ಇಲಾಖೆ ಮತ್ತು ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಗಳು ಹಮ್ಮಿಕೊಳ್ಳುವ ಪ್ರದರ್ಶನಗಳಲ್ಲಿ ಆರ್ಟ್‌ವರ್ಕ್ಸ್, ಸಾಕ್ಷ್ಯಚಿತ್ರ ಇನ್ನಿತರೆ ಪರಿಕರಗಳೊಂದಿಗೆ ಅವರೊಂದಿಗೆ ಸಹಕರಿಸುವುದು. ಟಿಪ್ಪು ಸುಲ್ತಾನರ ಕಾಲದಿಂದ ಪ್ರಾರಂಭಿಸಿ 1857ರ ಪ್ರಥಮ ಸ್ವಾತಂತ್ರ್ಯ ಸಂಗ್ರಾಮದವರೆಗೆ ಸಂಬಂಧಿಸಿದ ಘಟನಾವಳಿಗಳ ರೇಖಾಚಿತ್ರ ತಯಾರು ಮಾಡಿ ಪ್ರದರ್ಶಿಸುವುದು. | ರೂ. 20.00 ಲಕ್ಷ |
| 7) | **ವಕ್ಫ್ ಬೋರ್ಡ್ :** ಈ ಇಲಾಖೆ ವತಿಯಿಂದ ಶ್ರೀರಂಗಪಟ್ಟಣದಲ್ಲಿ ದಿನಾಂಕ 15–8–2008ರಿಂದ ಮೂರು ದಿನಗಳ ಕಾಲ ಮುಸ್ಯೆರ ಮತ್ತು ಖವಾಲಿ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸುವುದು. | ರೂ. 3.00 ಲಕ್ಷ |
| 8) | **ಪ್ರವಾಸೋದ್ಯಮ ಇಲಾಖೆ :** ಭಾರತ ಸರ್ಕಾರದಿಂದ ಕಾರ್ಯಕ್ರಮಕ್ಕಾಗಿ ಬಿಡುಗಡೆಗೊಳಿಸಿರುವ ಒಟ್ಟು ರೂ. 2.50 ಕೋಟಿ ಹಣದಲ್ಲಿ ಈ ಮೇಲಿನಂತೆ ಹಣವನ್ನು ಹಂಚಿಕೆ ಮಾಡಲಾದ ನಂತರ ಉಳಿದ ರೂ. 1.14 ಕೋಟಿ ಹಣವನ್ನು ಪ್ರವಾಸೋದ್ಯಮ ಇಲಾಖೆಗೆ | ರೂ. 1.14 ಕೋಟಿ |

| | |
|---|---|
| ಹಂಚಿಕೆ ಮಾಡಲಾಗಿದೆ. ಈ ಹಣದಲ್ಲಿ ಶ್ರೀರಂಗಪಟ್ಟಣದ ಟಿಪ್ಪುಸುಲ್ತಾನರ ಕಾಲದ ಕೋಟೆಗೆ ಧ್ವನಿ ಮತ್ತು ಬೆಳಕಿನ ವ್ಯವಸ್ಥೆಯನ್ನು ಸಾರ್ವಜನಿಕರ ಅನುಕೂಲಕ್ಕಾಗಿ ಶಾಶ್ವತವಾಗಿ ಕಲ್ಪಿಸುವುದು. ಈ ಹಣ ಸಾಲದಿದ್ದಲ್ಲಿ ಹೆಚ್ಚುವರಿ ರೂ. 36.00 ಲಕ್ಷಗಳನ್ನು ಇಲಾಖೆಯ ಆಯವ್ಯಯ ಉಳಿತಾಯದ ಹಣದಿಂದ ಭರಿಸುವುದು. ಒಟ್ಟಿನಲ್ಲಿ ರೂ. 1.50 ಕೋಟಿಗೆ ಮೀರದಂತೆ ಈ ಕಾಮಗಾರಿಯನ್ನು ಪೂರ್ಣಗೊಳಿಸುವುದು. ಈ ವ್ಯವಸ್ಥೆಯಲ್ಲಿ ಚರಿತ್ರೆಯ ಹಾಗೂ ಸ್ವಾತಂತ್ರ್ಯದ ಹೋರಾಟದ ಹಿನ್ನೆಲೆಯಲ್ಲಿ ಅಂಡಮಾನ್‌ನಲ್ಲಿ ನಿರ್ಮಿಸಿರುವಂತೆ ಸ್ಕ್ರಿಪ್ಟ್‌ನ್ನು ಇತಿಹಾಸ ತಜ್ಞರಿಂದ ತಯಾರಿಸಿ ಅಳವಡಿಸುವುದು. ಇದು ಸ್ವಾತಂತ್ರ್ಯ ಹೋರಾಟದ ಚಿತ್ರಣ, ಎಫರ್ಟ್ಸ್, ಸಾಕ್ರಿಫೈಸ್, ಮೋಟಿವೇಶನ್‌ಗಳನ್ನೊಳಗೊಂಡಿರಬೇಕು. | |
| **ಒಟ್ಟು** | **ರೂ. 2.50 ಕೋಟಿ** |

**ಎಂ.ಕೆ. ಭರ್ಮರಾಜಪ್ಪ**
ಪಿ.ಆರ್. 1166
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ವಿಷಯ :** ಡಾ: ಶಕುಂತಲ, ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ದೊಡ್ಡಬಳ್ಳಾಪುರ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರನ್ನು ಸೇವೆಯಿಂದ ವಿಮೋಚನೆಗೊಳಿಸುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪತ್ರ ಸಂ: ಡಿಪಿಜಿ(1)/ಬೆಂಗ್ರಾ/91/2003–04, ದಿನಾಂಕ 13–3–2008 ಮತ್ತು 5–6–2008.

**ಪ್ರಸ್ತಾವನೆ :**

ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ಮೇಲೆ ಓದಲಾದ ಪ್ರಸ್ತಾವನೆಯಲ್ಲಿ ಡಾ: ಶಕುಂತಲ, ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ದೊಡ್ಡಬಳ್ಳಾಪುರ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರು ದಿನಾಂಕ 20–7–2000ರಂದು ಸೇವೆಗೆ ಸೇರಿದ್ದು ದಿನಾಂಕ 29–3–2001ರಿಂದ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುತ್ತಾರೆಂದು ಸದರಿ ವೈದ್ಯರಿಗೆ ದೋಷಾರೋಪಣಾ ಪಟ್ಟಿ ಜಾರಿ ಮಾಡಿದ್ದು, ಸ್ವೀಕೃತಿಯು ಅಂಚೆ ಕಚೇರಿಯಿಂದ ಹಿಂದಿರುಗಿ ಬಂದ ಕಾರಣ ದಿನಾಂಕ 12–6–2006ರಲ್ಲಿ ಪತ್ರಿಕಾ ಪ್ರಕಟಣೆ ನೀಡಿದ್ದರೂ ವಿಚಾರಣೆಗೆ ಹಾಜರಾಗಿರುವುದಿಲ್ಲ.

ಆದ್ದರಿಂದ ಸದರಿ ವೈದ್ಯರು ಖಾಯಂ ಪೂರ್ವ ಸೇವಾ ಅವಧಿಯಲ್ಲಿ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ಖಾಯಂ ಪೂರ್ವ) ನಿಯಮಗಳು 1977ರ ನಿಯಮ 6(2)(1)ರ ಅಡಿಯಲ್ಲಿ ಶಿಸ್ತುಕ್ರಮ ಕೈಗೊಳ್ಳಲು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿ ಸದರಿಯವರನ್ನು ಸೇವೆಯಿಂದ ವಿಮೋಚನೆಗೊಳಿಸಲು ಸರ್ಕಾರವು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 354 ಹೆಚ್‌ಎಸ್‌ಹೆಚ್ 2008, ಬೆಂಗಳೂರು, ದಿನಾಂಕ: 15ನೇ ಜುಲೈ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಡಾ: ಶಕುಂತಲ, ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ದೊಡ್ಡಬಳ್ಳಾಪುರ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರು ದಿನಾಂಕ 29–3–2001 ರಿಂದ ಖಾಯಂ ಪೂರ್ವ ಸೇವಾವಧಿಯಲ್ಲಿ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿ ಕರ್ತವ್ಯಚ್ಯುತಿ ಎಸಗಿರುವುದರಿಂದ ಸದರಿಯವರನ್ನು ಕರ್ನಾಟಕ ನಾಗರೀಕ ಸೇವಾ (ಖಾಯಂಪೂರ್ವ) ನಿಯಮಾವಳಿ 1977ರ ನಿಯಮ 6 ರಡಿಯಲ್ಲಿ ದಿನಾಂಕ 29–3–2001 ರಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಪಿ.ಆರ್. 1131
**ಐ. ಹೇಮನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಸೇವೆಗಳು–1)

**ವಿಷಯ :** ಶ್ರೀಮತಿ ಎ. ಜಯಮ್ಮ, ನಿವೃತ್ತ ಕಿರಿಯ ಮಹಿಳಾ ಆರೋಗ್ಯ ಸಹಾಯಕಿ, ಪ್ರಾಥಮಿಕ ಆರೋಗ್ಯ ಕೇಂದ್ರ, ತೋಲಹಳ್ಳಿ, ಬಳ್ಳಾರಿ ಜಿಲ್ಲೆ ಇವರು ಸರ್ಕಾರಿ ಸೇವೆಗೆ ಗೈರು ಹಾಜರಾಗಿದ್ದಕ್ಕೆ ನಿಯಮ 214(1)(ಎ) ಅನ್ವಯ ಶಿಸ್ತು ಕ್ರಮ ತೆಗೆದುಕೊಳ್ಳುವ ಬಗ್ಗೆ ಆದೇಶ.

**ಓದಲಾಗಿದೆ:** 1. ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಇವರ ಪತ್ರ ಸಂಖ್ಯೆ: ಡಿಪಿಎನ್ (17) ಸಿಆರ್/127/1988-89, ದಿನಾಂಕ 30-7-2005.

2. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿ.ಎಸ್.ಸಿ./289/ಡಿಎನ್‌ಎಸ್/2007, ದಿನಾಂಕ 29-4-2008.

**ಪ್ರಸ್ತಾವನೆ :**

ಮೇಲೆ ಓದಲಾದ ಪ್ರಸ್ತಾವನೆಯಲ್ಲಿ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ಶ್ರೀಮತಿ ಎ. ಜಯಮ್ಮ, ಕಿರಿಯ ಮಹಿಳಾ ಆರೋಗ್ಯ ಸಹಾಯಕಿ (ನಿವೃತ್ತ), ರವರು ಪ್ರಾಥಮಿಕ ಆರೋಗ್ಯ ಕೇಂದ್ರ, ತೋಲಹಳ್ಳಿ, ಬಳ್ಳಾರಿ ಜಿಲ್ಲೆ, ಇಲ್ಲಿ ಸೇವೆ ಸಲ್ಲಿಸುತ್ತಿದ್ದ ಸಮಯದಲ್ಲಿ ದಿನಾಂಕ 1-6-1981 ರಿಂದ 30-6-2000 ರವರೆಗೆ ಅಂದರೆ ವಯೋನಿವೃತ್ತಿ ದಿನಾಂಕದವರೆಗೆ ಧೀರ್ಘಕಾಲ ಅನಧಿಕೃತ ಗೈರು ಹಾಜರಾಗಿರುತ್ತಾರೆ. ತದನಂತರ, ಆರೋಪಿತ ನೌಕರಳ ಮೇಲೆ ನಿಯಮಾನುಸಾರ ಕ್ರಮ ತೆಗೆದುಕೊಳ್ಳುವ ಪ್ರಕ್ರಿಯೆ ಪ್ರಾರಂಭಿಸಿ ದಿನಾಂಕ 27-12-1988 ರಂದು ದೋಷಾರೋಪಣೆಯನ್ನು ನೌಕರಳಿಗೆ ಜಾರಿ ಮಾಡಲಾಗಿರುತ್ತದೆ. ಇದಕ್ಕೆ ನೌಕರಳು ಲಿಖಿತ ಉತ್ತರ ನೀಡಿರುವುದಿಲ್ಲ. ತದನಂತರ ಮುಖ್ಯ ಜಾಗೃತ ಅಧಿಕಾರಿಗಳು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಇವರು ಇಲಾಖಾ ವಿಚಾರಣೆಯನ್ನು ನಡೆಸಿ, ವಿಚಾರಣಾ ವರದಿಯನ್ನು ದಿನಾಂಕ 28-10-2004ರಂದು ನೌಕರಳಿಗೆ ಜಾರಿ ಮಾಡಿದ್ದರೂ ಸಹ, ನೌಕರಳು ಯಾವುದೇ ಲಿಖಿತ ಉತ್ತರವನ್ನು ನೀಡಿರುವುದಿಲ್ಲ. ನೌಕರಳು ಇಲಾಖಾ ವಿಚಾರಣೆಯ ಸಮಯದಲ್ಲಿ ಒಂದು ದಿನವೂ ಹಾಜರಾಗದೇ ಇರುವುದು ಕಂಡು ಬಂದಿದ್ದರಿಂದ ಅಂತಿಮವಾಗಿ ದಿನಾಂಕ 8-4-2004ರಂದು 'ವಿಜಯ ಕರ್ನಾಟಕ' ದಿನ ಪತ್ರಿಕೆಯಲ್ಲಿ ಪ್ರಕಟಣೆ ಮಾಡಲಾಗಿದ್ದು, ಇದಕ್ಕೆ ಸಹ ಯಾವುದೇ ಪ್ರತಿಕ್ರಿಯೆ ನೀಡಿರುವುದಿಲ್ಲ.

ನೌಕರಳು ಸುಮಾರು 19 ವರ್ಷಗಳ ದೀರ್ಘಕಾಲ ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಾಗಿರುವುದರಿಂದ ಹಾಗೂ ವಯೋನಿವೃತ್ತಿ ಹೊಂದಿರುವುದರಿಂದ ಕರ್ನಾಟಕ ನಾಗರೀಕ ಸೇವೆ ನಿಯಮಗಳು ನಿಯಮ 214(1)(ಎ) ಅನ್ವಯ ಸರ್ಕಾರದ ಹಂತದಲ್ಲಿ ಕ್ರಮ ತೆಗೆದುಕೊಂಡು ಸದರಿಯವರ ನಿವೃತ್ತಿ ಸೌಲಭ್ಯಗಳನ್ನು ಸಂಪೂರ್ಣವಾಗಿ ಹಾಗೂ ಶಾಶ್ವತವಾಗಿ ತಡೆಹಿಡಿಯಲು ಸರ್ಕಾರವನ್ನು ಕೋರಿದ್ದಾರೆ.

ನಿರ್ದೇಶನಾಲಯದ ಕಡತವನ್ನು ಹಾಗೂ ಇಲಾಖಾ ವಿಚಾರಣೆ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಶ್ರೀಮತಿ ಎ. ಜಯಮ್ಮ, ನಿವೃತ್ತ ಕಿರಿಯ ಮಹಿಳಾ ಆರೋಗ್ಯ ಸಹಾಯಕಿ, ಇವರು ದಿನಾಂಕ 1-6-1981 ರಿಂದ 30-6-2000 ರವರೆಗೆ (ವಯೋನಿವೃತ್ತಿ ದಿನಾಂಕದವರೆಗೆ) ಸರ್ಕಾರಿ ಸೇವೆಗೆ ದೀರ್ಘಕಾಲ ಅನಧಿಕೃತ ಗೈರು ಹಾಜರಾಗಿದ್ದು, ನೌಕರಳು ದೋಷಾರೋಪಣೆಗೆ ಅಥವಾ ಇಲಾಖಾ ವಿಚಾರಣೆಯ ಸಂದರ್ಭದಲ್ಲಿ ಯಾವುದೇ ಪ್ರತಿಕ್ರಿಯೆ ವ್ಯಕ್ತಪಡಿಸಿರುವುದಿಲ್ಲ. ಸರ್ಕಾರದ ಹಂತದಲ್ಲಿ ನೌಕರಳ ವಿಳಾಸಕ್ಕೆ ಹಾಗೂ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿ, ಬಳ್ಳಾರಿ ಇವರ ಮುಖಾಂತರ ಕಾರಣ ಕೇಳುವ ನೋಟೀಸುಗಳನ್ನು ಕ್ರಮವಾಗಿ ದಿನಾಂಕ 16-11-2005 ರಂದು ಹಾಗೂ 13-1-2006 ರಂದು ಜಾರಿ ಮಾಡಲಾಗಿದ್ದು, ವಿಳಾಸದಾರರು ವಿಳಾಸದ ಸ್ಥಳದಲ್ಲಿ ಇರುವುದಿಲ್ಲ ಎಂಬ ಷರಾದೊಂದಿಗೆ ಲಕೋಟೆಗಳು ವಾಪಸ್ ಬಂದಿರುತ್ತವೆ. ಈ ಹಿನ್ನೆಲೆಯಲ್ಲಿ ಸರ್ಕಾರವು ನಿರ್ದೇಶನಾಲಯದ ವಿಚಾರಣೆ ವರದಿಯನ್ನು ಒಪ್ಪಿ ಏಕ ಪಕ್ಷೀಯವಾಗಿ ನಿರ್ಣಯವನ್ನು ಕೈಗೊಳ್ಳುವುದು ಸೂಕ್ತವೆಂದು ಭಾವಿಸಿ ಕರ್ನಾಟಕ ನಾಗರೀಕ ಸೇವಾ ನಿಯಮ 214(1)(ಎ) ರನ್ವಯ ನೌಕರಳ ಪಿಂಚಣಿ ಸೌಲಭ್ಯವನ್ನು ಶೇಕಡ 100ಕ್ಕೆ 100ರಷ್ಟು ಶಾಶ್ವತವಾಗಿ ಕಡಿತಗೊಳಿಸಲು ಸರ್ಕಾರವು ತೀರ್ಮಾನಿಸಿದೆ.

ಕರ್ನಾಟಕ ಲೋಕಸೇವಾ ಆಯೋಗವು ಶ್ರೀಮತಿ ಎ. ಜಯಮ್ಮ (ನಿವೃತ್ತಿ) ಕಿರಿಯ ಮಹಿಳಾ ಆರೋಗ್ಯ ಸಹಾಯಕಿ ಇವರಿಗೆ ಪಿಂಚಣಿ ಶೇ. 100ಕ್ಕೆ 100ರಷ್ಟು ಶಾಶ್ವತವಾಗಿ ಕಡಿತಗೊಳಿಸುವ ದಂಡನೆ ವಿಧಿಸಲು ನಿರ್ಧರಿಸಿರುವ ಸರ್ಕಾರದ ಪ್ರಸ್ತಾವನೆಗೆ ಸಹಮತಿಯಿದೆಯೆಂದು ಓದಲಾದ (2)ರ ಪತ್ರದಲ್ಲಿ ಸಹಮತಿ ನೀಡಿರುತ್ತಾರೆ. ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿ, ಕೆಳಕಂಡಂತೆ ದಂಡನೆ ವಿಧಿಸಲು ತೀರ್ಮಾನಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 231 ಎಫ್‌ಪಿಇ 2005, ಬೆಂಗಳೂರು, ದಿನಾಂಕ: 18ನೇ ಜುಲೈ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಶ್ರೀಮತಿ ಎ. ಜಯಮ್ಮ, ಕಿರಿಯ ಮಹಿಳಾ ಆರೋಗ್ಯ ಸಹಾಯಕಿ, (ನಿವೃತ್ತ) ಪ್ರಾಥಮಿಕ ಆರೋಗ್ಯ ಕೇಂದ್ರ, ತೋಲಹಳ್ಳಿ, ಬಳ್ಳಾರಿ ಜಿಲ್ಲೆ ಇವರು ದಿನಾಂಕ 1-6-1981 ರಿಂದ ವಯೋನಿವೃತ್ತಿ ಹೊಂದಿದ ದಿನಾಂಕ 30-6-2000 ರವರೆಗೆ ಸರ್ಕಾರಿ ಸೇವೆಗೆ ದೀರ್ಘಕಾಲ ಅನಧಿಕೃತ ಗೈರು ಹಾಜರಾಗಿದ್ದು, ನೌಕರಳು ಇಲಾಖಾ ವಿಚಾರಣೆಯ ಸಂದರ್ಭದಲ್ಲಿ ಹಾಗೂ ಪತ್ರಿಕಾ ಪ್ರಕಟಣೆಗೆ ಯಾವುದೇ ಪ್ರತಿಕ್ರಿಯೆ ನೀಡದೇ ಇರುವುದರಿಂದ ಹಾಗೂ ಇಲಾಖಾ ವಿಚಾರಣೆಯಲ್ಲಿ ನೌಕರಳ ಆರೋಪವು ಸಾಬೀತಾಗಿರುವುದರಿಂದ ಸರ್ಕಾರವು ಏಕ ಪಕ್ಷೀಯವಾಗಿ ನಿರ್ಣಯ

ಕೈಗೊಂಡು ಹಾಗೂ ನೌಕರಳು ಈಗಾಗಲೇ ವಯೋನಿವೃತ್ತಿ ಹೊಂದಿರುವುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮ 214(1)(ಎ) ರನ್ವಯ ನೌಕರಳ ಪಿಂಚಣಿ ಸೌಲಭ್ಯವನ್ನು ಶೇಕಡ 100ಕ್ಕೆ 100ರಷ್ಟು ಶಾಶ್ವತವಾಗಿ ಸರ್ಕಾರವು ಕಡಿತಗೊಳಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1130

**ಚಿಕ್ಕೇಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

**ಒಳಾಡಳಿತ ಸಚಿವಾಲಯ**

**ಸಂಖ್ಯೆ: ಒ.ಇ. 248 ಪೊಸಿಅ 2007, ಬೆಂಗಳೂರು, ದಿನಾಂಕ: 5ನೇ ಆಗಸ್ಟ್ 2008.**

**ತಿದ್ದುಪಡಿ**

ಶ್ರೀಮತಿ ಎಂ.ಎ. ಅಮೃತಬಾಯಿ, ಮಾಜಿ ಮ.ಪಿ.ಸಿ.–734, ಶಿವಮೊಗ್ಗ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯ ಬಗ್ಗೆ ಹೊರಡಿಸಿರುವ ಸರ್ಕಾರದ ಆದೇಶ ಸಂಖ್ಯೆ: ಒಇ 248 ಪೊಸಿಅ 2007, ದಿನಾಂಕ 17–1–2008ರ ಆದೇಶದಲ್ಲಿ "ಎಚ್ಚರಿಕೆ" ಎಂಬ ಪದದ ಬಲಿಗೆ "ವಾಗ್ದಂಡನೆ" ಎಂದು ಓದಿಕೊಳ್ಳುವಂತೆ ತಿದ್ದುಪಡಿ ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1171

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),

ಒಳಾಡಳಿತ ಇಲಾಖೆ

(ಪೊಲೀಸ್ ಸೇವೆಗಳು)

**HEALTH AND FAMILY WELFARE SECRETARIAT**

**Sub :** Inclusion of 2 more officers in the Strategic Planning Team – reg.

**Read :** Govt Order No. HFW (PR) 64 WBA 2005, Bangalore, dt: 25-3-2008.

**Preamble:**

Government in their Order read at (1) above have re-organised and re-named the 'Strategic Planning Cell' as 'Strategic Planning Team', to be headed by the Chief Administrative Officer, KHSDRP. The team has to practically plan, implement and supervise activities as envisaged in the OD work plan. Officers who are dealing different aspects of Organisation Development in the Directorate of Health and Family Welfare Services. State Institute of Health and Family Welfare and National Rural Health Mission are members of this team.

The Strategic Planning Team in its 7th meeting held on 7-7-2008 felt that the Deputy Director (Medical) of DoHFW Services and Deputy Director (HIV/TB) of KSAPS need to be made members of the Strategic Planning Team. The same was approved by the Project Administrator and E/o. Special Secretary to Government, Department of Health and Family Welfare.

Hence, the following order.

**Govt. Order No. HFW (PR) 64 WBA 2005, Bangalore, Dated 18th July 2007**

Under the circumstances mentioned in the preamble, Government are pleased to include Deputy Director (Medical) of DoHFW Services and Deputy Director (HIV/TB) of KSAPS as members of the Strategic Planning Team, under Organisation Development component of the Project.

By order and in the name of the Governor of Karnataka,

PR. 1105

**SUSHAMA GODBOLE**

Deputy Secretary to Government,

KHSDRP

Health and Family Welfare Department.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಸಂಖ್ಯೆ ಸಿಆಸುಇ 17 ಸೇಸವಿ 2008, ಬೆಂಗಳೂರು, ದಿನಾಂಕ 23ನೇ ಜುಲೈ 2008**

**ಸುತ್ತೋಲೆ**

**ವಿಷಯ :** ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘದ 2008ನೇ ವರ್ಷದ ಸದಸ್ಯತ್ವ ಶುಲ್ಕ ಪಾವತಿಸುವ ಬಗ್ಗೆ.

**ಉಲ್ಲೇಖ :**
1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 16 ಸೇಸವಿ 93, ದಿನಾಂಕ 24–12–1993.
2. ಸುತ್ತೋಲೆ ಸಂಖ್ಯೆ: ಸಿಆಸುಇ 19 ಸೇಸವಿ 2005, ದಿನಾಂಕ 16–11–2005.
3. ಸುತ್ತೋಲೆ ಸಂಖ್ಯೆ: ಸಿಆಸುಇ 22 ಸೇಸವಿ 2006, ದಿನಾಂಕ 5–1–2007.
4. ದಿನಾಂಕ 30–6–2008ರ ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘದ ಅಧ್ಯಕ್ಷರ ಪತ್ರ ಸಂಖ್ಯೆ ಜಿಇಎ 9029/2007–08.
5. ಸಿಆಸುಇ (ಲೆಕ್ಕಪತ್ರ–1) ವಿಭಾಗದ ಅ.ಟಿ. ಸಂಖ್ಯೆ: ಸಿಆಸುಇ 2360 ಲೆ.ಪ/ಬಿ/2008, ದಿನಾಂಕ 16–7–2008.

**ಪ್ರಸ್ತಾವನೆ :**

ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘದ ಸದಸ್ಯತ್ವ ಶುಲ್ಕವನ್ನು ಪಾವತಿ ಮಾಡುವ ಸಂಬಂಧವಾಗಿ ಉಲ್ಲೇಖ (1)ರಲ್ಲಿರುವ ದಿನಾಂಕ 24–12–1993ರ ಆದೇಶದಲ್ಲಿ ಸೂಚನೆಗಳನ್ನು ನೀಡಲಾಗಿದೆ. ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘದ ಸದಸ್ಯತ್ವ ಶುಲ್ಕ ಪರಿಷ್ಕೃತವಾದ ಹಿನ್ನೆಲೆಯಲ್ಲಿ ಸದಸ್ಯತ್ವ ಶುಲ್ಕವನ್ನು ನೌಕರರ ವೇತನದಿಂದ ಕಡಿತಗೊಳಿಸಿ ಸಂಘಕ್ಕೆ ಪಾವತಿಸುವ ಸಂಬಂಧವಾಗಿ ಉಲ್ಲೇಖ (2)ರಲ್ಲಿರುವ ದಿನಾಂಕ 16–11–2005ರ ಸುತ್ತೋಲೆಯಲ್ಲಿ ಸೂಚನೆಗಳನ್ನು ನೀಡಲಾಗಿದೆ. ಉಲ್ಲೇಖ (3)ರಲ್ಲಿರುವ ದಿನಾಂಕ 5–1–2007ರ ಸುತ್ತೋಲೆಯಲ್ಲಿ ದಿನಾಂಕ 16–11–2005ರ ಸುತ್ತೋಲೆಯ ಕಂಡಿಕೆ 4ನ್ನು ಮಾರ್ಪಡಿಸಿ ಸರ್ಕಾರಿ ನೌಕರರಿಂದ ವಾರ್ಷಿಕ ವಂತಿಗೆ ನೀಡುವ ಸಂಬಂಧವಾಗಿ ಸಮ್ಮತಿ ಪತ್ರವನ್ನು ಪಡೆಯುವ ಬಗ್ಗೆ ಸೂಚನೆಗಳನ್ನು ನೀಡಲಾಗಿದೆ.

ಪ್ರಸ್ತುತ 2008ನೇ ಸಾಲಿನ ಜನವರಿ ಹಾಗೂ ಫೆಬ್ರವರಿ ತಿಂಗಳಲ್ಲಿ ಸಂಘದ ಎಲ್ಲಾ ಹಂತದ ಮಹಾ ಚುನಾವಣೆಗಳು ನಡೆದ ಪ್ರಯುಕ್ತ ಕರ್ನಾಟಕ ಸರ್ಕಾರದ ಸಚಿವಾಲಯದ ಅಧಿಕಾರಿ ಮತ್ತು ನೌಕರರಿಂದ ಪ್ರಸಕ್ತ ಸಾಲಿನ ಸದಸ್ಯತ್ವ ಶುಲ್ಕವನ್ನು ನಿಗದಿತ ಅವಧಿಯಲ್ಲಿ ನೌಕರರ ವೇತನದಿಂದ ಕಟಾವುಗೊಳಿಸಲು ಸಾಧ್ಯವಾಗಿರುವುದಿಲ್ಲ. ಈ ಹಿನ್ನೆಲೆಯಲ್ಲಿ 2008ನೇ ಸಾಲಿನ ಸದಸ್ಯತ್ವ ಶುಲ್ಕವನ್ನು ಈ ವರ್ಷಕ್ಕೆ ಮಾತ್ರ ಸೀಮಿತಗೊಳಿಸಿ ಸಚಿವಾಲಯದ ಅಧಿಕಾರಿಗಳು ಮತ್ತು ನೌಕರರ ಸದಸ್ಯತ್ವ ಶುಲ್ಕವನ್ನು 2008ನೇ ಜುಲೈ ತಿಂಗಳ ವೇತನದಲ್ಲಿ ಕಟಾವುಗೊಳಿಸಿ ಕೇಂದ್ರ ಸಂಘಕ್ಕೆ ಪಾವತಿಸುವಂತೆ ಸಂಘದ ಅಧ್ಯಕ್ಷರು ತಮ್ಮ ಪತ್ರದಲ್ಲಿ ಕೋರಿರುತ್ತಾರೆ. ಉಲ್ಲೇಖ (5)ರಲ್ಲಿರುವ ಅನಧಿಕೃತ ಟಿಪ್ಪಣಿಯಲ್ಲಿ ಈ ಬಗ್ಗೆ 2008ನೇ ಸಾಲಿಗೆ ಅನ್ವಯಿಸುವಂತೆ ಸುತ್ತೋಲೆಯನ್ನು ಹೊರಡಿಸಲು ಸಿಆಸುಇ (ಲೆಕ್ಕಪತ್ರ) ವಿಭಾಗವು ಕೋರಿದೆ.

ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘಕ್ಕೆ ವಾರ್ಷಿಕ ಸದಸ್ಯತ್ವ ಶುಲ್ಕವಾದ ರೂ. 20/– (ಇಪ್ಪತ್ತು ರೂಪಾಯಿಗಳು ಮಾತ್ರ) ಗಳನ್ನು ನೀಡಬಯಸುವ ಸರ್ಕಾರದ ಸಚಿವಾಲಯದ ಅಧಿಕಾರಿ ನೌಕರರಿಂದ 2008ನೇ ಸಾಲಿಗೆ ಮಾತ್ರ ಸೀಮಿತಗೊಳಿಸಿ ಆಗಸ್ಟ್ ತಿಂಗಳ ಸಂಬಳದಿಂದ ಕಡಿತ ಮಾಡಿ ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘಕ್ಕೆ ಸಂದಾಯ ಮಾಡಬಹುದೆಂದು ಸಚಿವಾಲಯದ ವೇತನ ಬಟವಾಡೆ ಅಧಿಕಾರಿಗಳಿಗೆ ಈ ಮೂಲಕ ಸೂಚಿಸಲಾಗಿದೆ.

ಈ ವಿಷಯದಲ್ಲಿ ದಿನಾಂಕ 24–12–1993ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 16 ಸೇಸವಿ 93, ದಿನಾಂಕ 16–11–2005ರ ಸುತ್ತೋಲೆ ಸಂಖ್ಯೆ: ಸಿಆಸುಇ 19 ಸೇಸವಿ 2005 ಮತ್ತು ದಿನಾಂಕ 5–1–2007ರ ಸುತ್ತೋಲೆ ಸಂಖ್ಯೆ: ಸಿಆಸುಇ 22 ಸೇಸವಿ 2006ರಲ್ಲಿನ ಇತರ ಷರತ್ತು ಮತ್ತು ನಿಬಂಧನೆಗಳನ್ನು ಗಮನದಲ್ಲಿರಿಸಿಕೊಳ್ಳಬೇಕೆಂದು ಕೋರಲಾಗಿದೆ.

**ದೇವರಾಜು**

ಪಿ.ಆರ್. 1096

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವಾ ನಿಯಮಗಳು–1)

**PERSONNEL AND ADMINISTRATIVE REFORMS SECRETARIAT**

**Sub :** Departmental Enquiry against Sri A.M. Annaiah, IFS (KN-1985) – the then Deputy Conservator of Forests.

**Read :**
1) Government order No. DPAR 99 SFP 1994, dated: 3-9-2007.
2) D.O. Letter No. PCCF/PS/ENQ/2007-08, dated 16-5-2008 from Sri A.K. Varma, IFS, PCCF, Bangalore.

3. Letter dated 18-3-2008 and 29-5-2008 from Sri A.M. Annaiah, IFS, CF & Administrator, Bhadra, CADA, Shimoga.
4. Government Notification No. DPAR/ 94/SFP/2008, dated: 9-6-2008.

**Preamble:**

In G.O. dated 3-9-2007 read at (1) above, the Principal Chief Conservator of Forests, Bangalore was appointed as Enquiry officer to conduct a detailed enquiry against Sri A.M. Annaiah IFS, the then Deputy Conservator of Forests, Bangalore Urban Division, Bangalore on the charges relating to the irregularities in dealing with the application pertaining to grant of permission for felling of trees and thereafter for grant of transit passes for such converted materials while he was holding the charge of DCF, Hassan Territional Division. In his letter dated 16-5-2008 read at (2) above Sri A.K. Varma, Principal Chief Conservator of Forests, has stated Sri A.M. Annaiah IFS, who is persent on the date of hearing ie on 12-5-2008 has submitted a representation duly enclosing a copy of his letter dated 18-3-2008 addressed to Government in which he has requested to change the Enquiry Officer and also to defer the Departmental Enquiry till the Government takes a decision on his representation. The Principal Chief Conservator of Forests, has therefore requested to communicate the decision of Government, so as to enable him to proceed or otherwise as Enquiry Officer in the above case.

In his letters dated 18-3-2008 and 29-5-2008 read at (3) above, Sri A.M. Annaiah, IFS has stated that the present Enquiry Officer who has been enquired into the allegation made against him, has not proceeded with the Enquiry since November 2007 and hence requested to appoint a retired District Judge as Enquiry Officer to enquire into the allegations against him.

In Notification dated 9-6-2008 read at (4) above, Sri A.K. Varma, IFS, has been transferred from the post of Principal Chief Conservator of Forests and Dr. P.J. Dilipkumar, IFS has been posted as Principal Chief Conservator of Forests, Bangalore in place of Sri A.K. Varma, IFS.

Since the Principal Chief Conservator of Forests, has changed, the request of Sri A.M. Annaiah, IFS, so far as the change of Enquiry officer has been complied with. In the above circumstances, Government decided to appoint Dr. P.J. Dilipkumar, IFS, the present Principal Chief Conservanor of Forests by name as Enquiry Officer to conduct the enquiry, initiated against Sri A.M. Annaiah, IFS in place of "Principal Chief Conservator of Forests, Bangalore". Hence the following order.

**Government Order No. DPAR 99 SFP 1994, Bangalore, Dated 3rd July 2008**

In partial modification of the G.O. of even number dated 3-9-2007, Government in exercise of the powers conferred under rule (2) of Rule 8 of the All India Service (Discipline & Appeal) Rules, 1969, appoint Dr. P.J. Dilipkumar, IFS, PCCF, Bangalore to conduct a detailed enquiry against Sri A.M. Annaiah, IFS, presently working as CF, Bhadra, CADA, Shimoga. Except to this extent the Government Order dated 3-9-07 stands modified and rest of the order remian unaltered.

PR. 1029

By order and in the name of the Governor of Karnataka,
**K.G. ANANTHA**
Under Secretary to Government,
DPAR (Services-1)

**ಕಂದಾಯ ಸಚಿವಾಲಯ**

**ವಿಷಯ :** ಶ್ರೀ ಎನ್.ಸಿ. ವಸಂತಕುಮಾರ್, ಭೂದಾಖಲೆಗಳ ಉಪನಿರ್ದೇಶಕರು, ವಿಚಾರಣಾಧಿಕಾರಿಗಳು, ನಗರಮಾಪನ ತಂಡ–1, ಬೆಂಗಳೂರು ರವರು ಸರ್ಕಾರದ ದಂಡನೆ ಆದೇಶದ ವಿರುದ್ಧ ಘನತೆವೆತ್ತ ರಾಜ್ಯಪಾಲರಿಗೆ ಸಲ್ಲಿಸಲಾದ ಮೇಲ್ಮನವಿ ಬಗ್ಗೆ ಆದೇಶ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ ಕಂಇ 24 ಭೂದಾಸೇ (1) 97, ಬೆಂಗಳೂರು ದಿನಾಂಕ 7–3–2002.
2. ಶ್ರೀ ಎನ್.ಸಿ. ವಸಂತಕುಮಾರ್, ಭೂ.ಉ.ನಿ.ರವರು ಘನತೆವೆತ್ತ ರಾಜ್ಯಪಾಲರಿಗೆ ಸಲ್ಲಿಸಿದ ದಿನಾಂಕ 27–8–2002ರ ಮೇಲ್ಮನವಿ.
3. ಕಾರಣ ಕೇಳಿ ನೋಟೀಸ್ ಸಂಖ್ಯೆ: ಕಂಇ 02 ಭೂದಾಸೇ (1) 2003, ದಿ: 7–3–2007.

4. ಶ್ರೀ ಎನ್.ಸಿ. ವಸಂತಕುಮಾರ್‌ರವರ ದಿ: 21–3–2007ರ ಲಿಖಿತ ಉತ್ತರ.
5. ಮಾನ್ಯ ಘನತೆವೆತ್ತ ರಾಜ್ಯಪಾಲರ ಆದೇಶ ಸಂಖ್ಯೆ: ಜಿಎಸ್/59/ಆರ್‌ಎಸಿ/2002, ದಿ: 15–1–2008 ಮತ್ತು ದಿ: 9–6–2008.

**ಪ್ರಸ್ತಾವನೆ :**

ಶ್ರೀ ಎನ್.ಸಿ. ವಸಂತಕುಮಾರ್, ಭೂದಾಖಲೆಗಳ ಉಪನಿರ್ದೇಶಕರು, ವಿಚಾರಣಾಧಿಕಾರಿಗಳು, ನಗರಮಾಪನ ತಂಡ–1, ಬೆಂಗಳೂರು ಇವರು ಈ ಹಿಂದೆ ಶಿವಮೊಗ್ಗ ವಿಭಾಗದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಇವರಿಗೆ ಹಂಚಿಕೆ ಮಾಡಲಾದ ಸರ್ಕಾರಿ ವಾಹನ (ಜೀಪ್) ಸಂಖ್ಯೆ: ಕೆಎ 14 ಜಿ 229ನ್ನು ಸ್ವತಃ ಚಾಲನೆ ಮಾಡಿ ಅದನ್ನು ಅಪಘಾತಕ್ಕೆ ಈಡು ಮಾಡಿ ವಿಷಯವನ್ನು ಮೇಲಾಧಿಕಾರಿಗಳ ಗಮನಕ್ಕೆ ತರದೇ ಸದರಿ ವಾಹನವನ್ನು ರಿಪೇರಿ ಮಾಡಿಸಿದರೆಂಬ ಹಾಗೂ ಖಾಸಗಿ ಉಪಯೋಗಕ್ಕಾಗಿ ವಾಹನವನ್ನು ಓಡಿಸಿದರೆಂಬ ಮತ್ತು ಸರ್ಕಾರಿ ವಾಹನವನ್ನು ನಿರ್ವಹಿಸಲು ಅನುಸರಿಸಬೇಕಾದ ವಿಧಿ ವಿಧಾನಗಳನ್ನು ಅನುಸರಿಸದೇ ಈ ಕೆಳಕಂಡ ಆರೋಪಗಳನ್ನು ಎಸಗಿದರೆಂಬ ಕಾರಣಗಳ ಮೇಲೆ ಅವರ ವಿರುದ್ಧ ಇಲಾಖಾ ವಿಚಾರಣೆ ಆದೇಶಿಸಲಾಗಿತ್ತು.

1) ಭೂದಾಖಲೆಗಳ ಉಪನಿರ್ದೇಶಕರು, ಶಿವಮೊಗ್ಗ ಇವರಿಗೆ ಹಂಚಿಕೆ ಮಾಡಲಾದ ಸರ್ಕಾರಿ ವಾಹನ ಸಂಖ್ಯೆ (ಜೀಪ್) ಕೆ.ಎ. 14 ಜಿ. 229 ನ್ನು ಹಿಂದಿನ ಭೂದಾಖಲೆಗಳ ಉಪ ನಿರ್ದೇಶಕರಾದ ಶ್ರೀ ಎನ್.ಸಿ. ವಸಂತಕುಮಾರ್ ರವರು ಸ್ವತಃ ತಾವೇ ಚಲಾಯಿಸಿ ಅದನ್ನು ಅಪಘಾತಕ್ಕೆ ಈಡು ಮಾಡಿ ಮೇಲಾಧಿಕಾರಿಗಳ ಗಮನಕ್ಕೆ ತರದೆ ಇರುವುದು.
2) ಕಛೇರಿ ವಾಹನವನ್ನು ಸರ್ಕಾರಿ ಕೆಲಸಕ್ಕೆ ಬಳಸಿದ್ದಲ್ಲಿ ಬಳಕೆಗಾಗಿ ತಗಲುವ ಇಂಧನ ದುರಸ್ತಿ ವೆಚ್ಚವನ್ನು ಮರು ಪಾವತಿ ಮಾಡಿಸಿಕೊಳ್ಳದೆ ಶ್ರೀ ಎನ್.ಸಿ. ವಸಂತಕುಮಾರ್, ಭೂದಾಖಲೆಗಳ ಉಪ ನಿರ್ದೇಶಕರು ರವರೇ ಭರಿಸಿ ಕರ್ನಾಟಕ ಆರ್ಥಿಕ ಸಂಹಿತೆಯ ಅನುಚ್ಛೇದ 174(4)ನ್ನು ಉಲ್ಲಂಘಿಸಿರುವುದು.
3) ಶ್ರೀ ಎನ್.ಸಿ. ವಸಂತಕುಮಾರ್, ಭೂದಾಖಲೆಗಳ ಉಪ ನಿರ್ದೇಶಕರು, ಇವರು ಜೀಪಿನ ಸ್ಪೀಡೋಮೀಟರ್ 6985ನ್ನು ಸ್ಥಗಿತಗೊಳಿಸಿದ್ದರು. ಆದರೆ 3 ಟೈರುಗಳು ಸಂಪೂರ್ಣವಾಗಿ ಸವೆದಿದ್ದು, ಆ ವಾಹನವು ಮೀಟರ್ ರೀಡಿಂಗ್‌ಗಿಂತ 19000 ಕಿ.ಮೀ. ಗೂ ಹೆಚ್ಚು ಓಡಿದ್ದು, ಈ ವಾಹನವನ್ನು ಖಾಸಗಿಯಾಗಿ ಉಪಯೋಗಿಸಿದ್ದಾರೆ. ಈ ನಡತೆ ಆರ್ಥಿಕ ಸಂಹಿತೆಯ ಉಲ್ಲಂಘನೆಯಾಗಿರುತ್ತದೆ.
4) ಸದರಿ ವಾಹನವನ್ನು ಖಾಸಗಿ ಕೆಲಸಕ್ಕೆ ಬಳಸಿಕೊಂಡಾಗ ಆ ಬಗ್ಗೆ 24 ಗಂಟೆಯೊಳಗೆ ಆ ವಾಹನದ ಲಾಗ್ ಪುಸ್ತಕದಲ್ಲಿ ಮತ್ತು ಆ ವಾಹನವನ್ನು ಖಾಸಗಿ ಉಪಯೋಗಕೆ ಬಳಸಿದ ಬಗ್ಗೆ ಸರ್ಕಾರಿ ಖಜಾನೆಗೆ ನಿಗಧಿತ ದರದಂತೆ ಹಣ ಪಾವತಿಸಲಿಲ್ಲ. ಹೀಗೆ ವಾಹನವನ್ನು ಉಪಯೋಗಿಸಿಕೊಂಡು ದುರ್ನಡತೆ ಎಸಗಿರುತ್ತಾರೆ.

ಸದರಿ ಕರ್ತವ್ಯ ಲೋಪ ಎಸಗಿದರೆಂಬ ಆರೋಪದ ವಿರುದ್ಧ ಇಲಾಖಾ ವಿಚಾರಣೆ ನಡೆಸಿ ಮೇಲೆ (1)ರಲ್ಲಿ ಓದಲಾದ ದಿ: 7–3–2002ರ ಸರ್ಕಾರಿ ಆದೇಶದಲ್ಲಿ ಶಿಸ್ತು ಪ್ರಾಧಿಕಾರಿಯಾದ ಸರ್ಕಾರವು ಶ್ರೀ ಎನ್.ಸಿ. ವಸಂತಕುಮಾರ್‌ರವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(iii)ರನ್ವಯ ಅವರ ವೇತನದಲ್ಲಿ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ರಹಿತವಾಗಿ ತಡೆಹಿಡಿಯುವ ದಂಡನೆ ಹಾಗೂ ಇವರು ವಾಹನವನ್ನು ಖಾಸಗಿ ಕೆಲಸಕ್ಕೆ ಬಳಸಿಕೊಂಡ ಬಗ್ಗೆ ತಗುಲಿದ ಖರ್ಚನ್ನು ಲೆಕ್ಕಹಾಕಿ ಇವರ ಸಂಬಳದಿಂದ ವಸೂಲು ಮಾಡಲು ಆದೇಶಿಸಲಾಗಿತ್ತು.

ಮೇಲ್ಕಂಡ ದಂಡನಾ ಆದೇಶದ ವಿರುದ್ಧ ಆರೋಪಿತರು ಕರ್ನಾಟಕ ನಾಗರೀಕ ಸೇವೆ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 18ರಂತೆ ಘನತವೆತ್ತ ರಾಜ್ಯಪಾಲರಿಗೆ ಮೇಲೆ (2)ರಲ್ಲಿ ಓದಲಾದ ದಿನಾಂಕ 27–8–2002ರ ಮೇಲ್ಮನವಿ ಸಲ್ಲಿಸಿ ನ್ಯಾಯವನ್ನು ಒದಗಿಸಿ ಕೊಡಲು ಕೋರಿದ್ದರು.

ಈ ಬಗ್ಗೆ ಘನತೆವೆತ್ತ ರಾಜ್ಯಪಾಲರು ದಿನಾಂಕ 26–2–2007ರ ಆದೇಶದಲ್ಲಿ ಕರ್ನಾಟಕ ನಾಗರೀಕ ಸೇವೆ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 25(2)(C)ರಂತೆ ಪರಿಶೀಲಿಸಿ ಹೆಚ್ಚಿನ ದಂಡನೆ ಏಕೆ ವಿಧಿಸಬಾರದು ಎಂಬುದಕ್ಕೆ ಆರೋಪಿತರಿಗೆ ಕಾರಣ ಕೇಳಿ ನೋಟೀಸ್ ಹೊರಡಿಸಲು ಆದೇಶಿಸಿದರು.

According to the order of the His Excellancy Governor of Karnataka it was examined as per Rule 25(2)(C) of the Karnataka Civil Service (CCA) Rules, 1957.

As per the above Rule, a show cause notice was issued to the appellant on 7-3-2007. The appellant Sri N.C. Vasanth Kumar has given his written statement in this regard.

a) I accept the penal order made or imposed on 7-3-2002 previously and the penalty imposed is very high. I request you to conclude the case at your level.

b) Since the enquiry officer himself has told that the porposed "vehilce has not met with an accident" there is nothing I can tell in this regard.

c) When the said vehicle was allotted to the Shimoga Divisional Office there was no driver.

d) Vehicle has traveled 1000 kms. from Pune to Shimoga.

e) From 18-9-1993 to 15-9-1994, the vehilce was parked in the outside premises of the office. This was brought to the notice of the higher authorities several times. On 15-9-94, permission was obtained from the Public Works Department and 15-9-94 onwards vehilce was parked in the private shed on rental basis.

f) As the vehicle was parked outside from 18-9-93 to 15-9-94, the colour of the vehicle turned brown. I have got rubbing, polishing and etc., done at my own expenses and I have explained about this to the Honourable Director during his visit to the office.

g) I myself had borne the expenses towards rubbing-polish, greasing, water service for a period of one year and intended to get it back by claiming through D.C. bill. In case I do not get the amount also I will consider it as my service to the Government. I have not cheated the Government.

h) When I was the Head of the Training Institution for Land Surveyors, Shimoga from 15-2-96 to 30-2-96 I was given permission in the letter dated 1-7-1996 to utilize and appoint a driver temporarily. Hence I had used the (said vehicle) for training institute from 15-2-96 to 30-9-96 (8 months) and has traveled 5000 kms. as a result of which there are problems with tyres of the vehicle (worn out) and there are also some technical defects. I have not done any damages to the vehicle.

i) On 8-10-97 I have handed over the car incharge to Sri Mallikarjunaiah, Deputy Director of Land Records. I have neither caused any accident to the vehicle nor any financial loss to the Government.

But, as it has caused great financial loss and loss to mental and physical health, he has requested to confirm the penalty already imposed and to close the case at this stage itself.

The above statements given by the appellant Sri N.C. Vasanth Kumar do not contain any new points and he has mentioned the matters which are totally far from truth. So the damage i.e., the financial loss caused to the Government will have to be borne by him. He has caused financial loss to the Government by using the Government vehicle willfully for his own use violating the rules and regulations of the Government which is unbecoming a responsbile Group-A officer and has violated Rule 3(i) (ii) (iii) of the Karnataka Civil Services (Conduct) Rules, 1966 and hence eligible for imposition of exces penalty.

ಮೇಲೆ ಓದಲಾದ ಕ್ರಮ ಸಂಖ್ಯೆ (5)ರಲ್ಲಿ ಘನವೆತ್ತ ರಾಜ್ಯಪಾಲರು ಸದರಿ ಮೇಲ್ಮನವಿಯ ವಾಸ್ತವಾಂಶವನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದ್ದರು.

Since the appellant has not made out any reasonable case in his representation, I dismiss the appeal petition as well as the representation and modify the punishment imposed in Government Order dated 7-3-2002 as follows:

1) His three annual increments may be withheld with cumulative effect;

2) Expenditure involved in personal use of the said vehicle for more than 19,000 kms may be recovered from him; and

3) The cost of the three tyres fully worn out because of personal use may be recovered from him.

ಈ ಬಗ್ಗೆ ಅಂತಿಮ ಆದೇಶ ಹೊರಡಿಸುವ ಹಂತದಲ್ಲಿ ಆರೋಪಿತರ ಜನ್ಮ ದಿನಾಂಕ 27–4–1952 ಆಗಿದ್ದು ಶ್ರೀಯುತರು 2 ವೇತನ ಬಡ್ತಿಗಳಿಗೆ ಮಾತ್ರ ಅರ್ಹವಿರುವುದನ್ನು ಗಮನಿಸಿದ ಸರ್ಕಾರವು ಸದರಿ ಅಂಶವನ್ನು ಘನತೆವೆತ್ತ ರಾಜ್ಯಪಾಲರ ಅವಗಾಹನೆಗೆ ತಂದು ಆರೋಪಿತರ ವಿರುದ್ಧ 3 ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತಪರಿಣಾಮ ಸಹಿತವಾಗಿ ತಡೆಹಿಡಿಯುವ ದಂಡನೆ ಬದಲಾಗಿ 2 ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ಸಹಿತವಾಗಿ ದಂಡನೆ ವಿಧಿಸಲು ಮರು ಆದೇಶಕ್ಕೆ ಮಂಡಿಸಲಾಗಿತ್ತು. ಘನತೆವೆತ್ತ ರಾಜ್ಯಪಾಲರು ಸದರಿ ಅಪೀಲು ಮನವಿಗೆ ಸಂಬಂಧಿಸಿದಂತೆ ಕಂಡಿಕೆವಾರು ಉತ್ತರ ಹಾಗೂ ದಾಖಲೆಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದ್ದಾರೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 2 ಭೂದಾಸೇ (1) 2003, ಬೆಂಗಳೂರು, ದಿನಾಂಕ: 3ನೇ ಜುಲೈ 2008.**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಮಾನ್ಯ ಘನತೆವೆತ್ತ ರಾಜ್ಯಪಾಲರು ಈ ಕೆಳಕಂಡಂತೆ ಆದೇಶಿಸಿರುತ್ತಾರೆ.

I had considered the representation submitted by Sri N.C. Vasantha Kumar, Deputy Director of Land Records, Bellary as per the second proviso to Rule 25(2)(c) of KCS (CCA) Rules, 1957 and since the appellant has not made out any reasonable case in his representation, I had modified the punishment imposed in G.O. dated 7-3-2002, after dismissing the appeal petition as well as the representation, as follows:

1) His three annual increments may be withheld with cumulative effect;
2) Expenditure involved in personal use of the said vehicle for more than 19,000 kms may be recovered from him; and
3) The cost of the three tyres fully worn out because of personal use may be recovered from him.

The Principal Secretary to Government, Revenue Department has brought to my notice that the appellant's date of birth is 27-4-1952 and he is retiring on 30-4-2010 on attaining the age of superannuation. His annual increment falls in the month of Octoer 2008 and October 2009 and he gets only two annual increments and hence a request has been made that two annual increments may be withheld with cumulative effect and the penalty at (2) and (3) above may be retained.

In view of the above, I have reconsidered the order passed in file No. RD 2 Bhudase (1) 2003 and I modify the order as follows:

1) Two annual increments may be withheld with cumulative effect;
2) Expenditure involved in personal use of the said vehicle for more than 19,000 kms may be recovered from him; and
3) The cost of the three tyres fully worn out because of personal use may be recovered from him.

**RAMESHWAR THAKUR**
Governor of Karnataka

GS 59 RAC 2002

ಈ ಪ್ರಕರಣದಲ್ಲಿ ಮೇಲ್ಮನವಿ ಪ್ರಾಧಿಕಾರರಾದ ಘನತೆವೆತ್ತ ರಾಜ್ಯಪಾಲರ ಆದೇಶದ ಅನ್ವಯ ಈ ಕೆಳಕಂಡಂತೆ ಆದೇಶ ಹೊರಡಿಸಿದೆ:

I. ಶ್ರೀ ಎನ್.ಸಿ. ವಸಂತಕುಮಾರ್, ಭೂದಾಖಲೆಗಳ ಉಪನಿರ್ದೇಶಕರು, ವಿಚಾರಣಾಧಿಕಾರಿಗಳು, ನಗರಮಾಪನ ತಂಡ–1, ಬೆಂಗಳೂರು ಅವರ ಮುಂದಿನ 2 ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ಸಹಿತವಾಗಿ ತಡೆಹಿಡಿಯಲಾಗಿದೆ.

II. ಸರ್ಕಾರಿ ವಾಹನವನ್ನು ಸ್ವಂತ ಉಪಯೋಗಕ್ಕಾಗಿ ಬಳಸಿರುವ 19000 ಕಿ.ಮೀ. ಕ್ರಮಿಸಿರುವ ವೆಚ್ಚವನ್ನು ಪ್ರತಿ ಕಿ.ಮೀ. ಪ್ರಯಾಣದ ದರದಲ್ಲಿ ವಸೂಲು ಮಾಡಿ ಸರ್ಕಾರಕ್ಕೆ ಜಮಾ ಮಾಡುವುದು.

III. ಖಾಸಗಿಯಾಗಿ ಬಳಸಲ್ಪಟ್ಟ ಕಾರಣದಿಂದಾಗಿ ಸವೆದು ಹೋದ 3 ಟೈರುಗಳ ಮೊತ್ತವನ್ನು ಆರೋಪಿಯಿಂದ ವಸೂಲು ಮಾಡಿ ಸರ್ಕಾರಕ್ಕೆ ಜಮಾ ಮಾಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1026

**ಎಸ್.ಬಿ. ಸಸಾಲಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂಮಾಪನ)

**ಕಾರ್ಮಿಕ ಸಚಿವಾಲಯ**

**ವಿಷಯ :** ಉದ್ಯೋಗ ಮತ್ತು ತರಬೇತಿ ಇಲಾಖೆಯ ತರಬೇತಿ ವಿಭಾಗದಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ–32ರಡಿಯಲ್ಲಿ ಸ್ವತಂತ್ರ ಪ್ರಭಾರದಲ್ಲಿ ಕಾರ್ಯನಿರ್ವಹಿಸುತ್ತಿದ್ದ ಬಿ.ಇ. ಪದವೀಧರ ಸಹಾಯಕ ತರಬೇತಿ/ಕಿರಿಯ ತರಬೇತಿ ಅಧಿಕಾರಿಗಳಿಗೆ ಪ್ರಾಚಾರ್ಯರು ದರ್ಜೆ–2/ಸಹಾಯಕ ನಿರ್ದೇಶಕರು (ತರಬೇತಿ) ವೃಂದಕ್ಕೆ ಪೂರ್ವಾನ್ವಯವಾಗಿ ಮುಂಬಡ್ತಿ ನೀಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂಖ್ಯೆ: ಕಾಇ 165 ಇಟಿಐ 2001 ದಿನಾಂಕ 4–4–2003.
2. ಸರ್ಕಾರದ ಅಧಿಸೂಚನೆ ಸಂಖ್ಯೆ: ಕಾಇ 218 ಇಟಿಐ 2004 ದಿನಾಂಕ 21–12–2006.
3. ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರ ಪತ್ರ ಸಂಖ್ಯೆ: ಉತಇ/ತರಬೇತಿ/ಆಡಳಿತ–6/ವಿವ–96/01–02, ದಿನಾಂಕ 8–2–2008.
4. ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 24 ಸಿಎನ್‌ಎಸ್ 08, ದಿನಾಂಕ 12–6–2008.

**ಪ್ರಸ್ತಾವನೆ :**

ಮೇಲಿನ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾದ ಅಧಿಸೂಚನೆಯಲ್ಲಿ ಉದ್ಯೋಗ ಮತ್ತು ತರಬೇತಿ ಇಲಾಖೆಯ ತರಬೇತಿ ವಿಭಾಗದ 12 ಮಂದಿ ಬಿ.ಇ. ಪದವೀಧರ ಸಹಾಯಕ ತರಬೇತಿ/ಕಿರಿಯ ತರಬೇತಿ ಅಧಿಕಾರಿಗಳಿಗೆ ಪ್ರಾಚಾರ್ಯರು ದರ್ಜೆ–2/ಸಹಾಯಕ ನಿರ್ದೇಶಕರು (ತರಬೇತಿ) ವೃಂದಕ್ಕೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ–32ರಡಿಯಲ್ಲಿ ಸ್ವತಂತ್ರ ಪ್ರಭಾರದಲ್ಲಿರಿಸಲಾಗಿತ್ತು.

ಮೇಲಿನ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ 11 ಮಂದಿ ಬಿ.ಇ. ಪದವೀಧರ ಸಹಾಯಕ ತರಬೇತಿ/ಕಿರಿಯ ತರಬೇತಿ ಅಧಿಕಾರಿಗಳಿಗೆ ಪೂರ್ವಾನ್ವಯವಾಗಿ ಮುಂಬಡ್ತಿಗಾಗಿ ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿಯನ್ನು ಕಾಯ್ದಿರಿಸಿ ಸ್ಥಾನಪನ್ನ ಮುಂಬಡ್ತಿ ನೀಡಲಾಗಿತ್ತು.

ಅದರಂತೆಯೇ, ಮೇಲಿನ ಕ್ರಮ ಸಂಖ್ಯೆ: (3)ರಲ್ಲಿ ಓದಲಾದ ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರು, ತಮ್ಮ ಪ್ರಸ್ತಾವನೆಯಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ–32ರಡಿಯಲ್ಲಿ ಸ್ವತಂತ್ರ ಪ್ರಭಾರದಲ್ಲಿ ಪ್ರಾಚಾರ್ಯರು ದರ್ಜೆ–2/ಸಹಾಯಕ ನಿರ್ದೇಶಕರು (ತರಬೇತಿ) ವೃಂದದಲ್ಲಿ ಕಾರ್ಯ ನಿರ್ವಸುತ್ತಿದ್ದ 12 ಮಂದಿ ಬಿ.ಇ. ಪದವೀಧರ ಸಹಾಯಕ ತರಬೇತಿ/ಕಿರಿಯ ತರಬೇತಿ ಅಧಿಕಾರಿಗಳಿಗೆ ಅವರುಗಳನ್ನು ಪ್ರಾಚಾರ್ಯರು ದರ್ಜೆ–2/ಸಹಾಯಕ ನಿರ್ದೇಶಕರು (ತರಬೇತಿ) ಹುದ್ದೆಗೆ ಸ್ವತಂತ್ರ ಪ್ರಭಾರೆಯಲ್ಲಿರಿಸಿದ ದಿನಾಂಕದಿಂದ ಪೂರ್ವಾನ್ವಯವಾಗಿ ಮುಂಬಡ್ತಿ ನೀಡುವಂತೆ ಕೋರಿರುತ್ತಾರೆ.

ಈ ಕುರಿತು ಸಮಗ್ರ ಪ್ರಸ್ತಾವನೆಯನ್ನು ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಗಾಗಿ ಕಳುಹಿಸಲಾಗಿತ್ತು. ಮೇಲಿನ ಕ್ರಮ ಸಂಖ್ಯೆ (4)ರಲ್ಲಿ ಓದಲಾದ ಪತ್ರದಲ್ಲಿ ಆಯೋಗವು, ಕರ್ನಾಟಕ ನಾಗರಕ ಸೇವಾ ನಿಯಮಾವಳಿಗಳ ನಿಯಮ–32ರಡಿಯಲ್ಲಿ ಪ್ರಾಚಾರ್ಯರು ದರ್ಜೆ–2/ಸಹಾಯಕ ನಿರ್ದೇಶಕರು (ತರಬೇತಿ) ವೃಂದದಲ್ಲಿ ಸ್ವತಂತ್ರ ಪ್ರಭಾರದಲ್ಲಿ ಕಾರ್ಯ ನಿರ್ವಹಿಸುತ್ತಿದ್ದ 12 ಮಂದಿ ಬಿ.ಇ. ಪದವೀಧರ ಸಹಾಯಕ ತರಬೇತಿ/ಕಿರಿಯ ತರಬೇತಿ ಅಧಿಕಾರಿಗಳಿಗೆ ಅವರುಗಳನ್ನು ಪ್ರಾಚಾರ್ಯರು ದರ್ಜೆ–2/ಸಹಾಯಕ ನಿರ್ದೇಶಕರು (ತರಬೇತಿ) ಹುದ್ದೆಗೆ ಸ್ವತಂತ್ರ ಪ್ರಭಾರೆಯಲ್ಲಿರಿಸಿದ ದಿನಾಂಕದಿಂದ ಪೂರ್ವಾನ್ವಯವಾಗಿ ಮುಂಬಡ್ತಿ ನೀಡುವಂತೆ ಸಹಮತಿ ನೀಡಿದೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಾಇ 218 ಇಟಿಐ 2004, ಬೆಂಗಳೂರು, ದಿನಾಂಕ: 14ನೇ ಜುಲೈ 2008.**

ಉದ್ಯೋಗ ಮತ್ತು ತರಬೇತಿ ಇಲಾಖೆಯ ತರಬೇತಿ ವಿಭಾಗದಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ–32ರಡಿಯಲ್ಲಿ ಸ್ವತಂತ್ರ ಪ್ರಭಾರದಲ್ಲಿ ಪ್ರಾಚಾರ್ಯರು ದರ್ಜೆ–2/ಸಹಾಯಕ ನಿರ್ದೇಶಕರು (ತರಬೇತಿ) ವೃಂದದಲ್ಲಿ ಕಾರ್ಯನಿರ್ವಹಿಸುತ್ತಿದ್ದ ಈ ಕೆಳಕಂಡ 12 ಮಂದಿ ಬಿ.ಇ. ಪದವೀಧರ ಸಹಾಯಕ ತರಬೇತಿ/ಕಿರಿಯ ತರಬೇತಿ ಅಧಿಕಾರಿಗಳಿಗೆ ಅವರ ಹೆಸರುಗಳ ಮುಂದೆ ನಮೂದಿಸಿರುವಂತೆ, ಅವರನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ–

32ರಡಿ ಪ್ರಾಚಾರ್ಯರು ದರ್ಜೆ-2/ಸಹಾಯಕ ನಿರ್ದೇಶಕರು (ತರಬೇತಿ) ಹುದ್ದೆಯಲ್ಲಿ ಸ್ವತಂತ್ರ ಪ್ರಭಾರದಲ್ಲಿರಿಸಿದ ದಿನಾಂಕದಿಂದ ಕರ್ನಾಟಕ ನಾಗರೀಕ ಸೇವೆಗಳು (ಆರ್‌ಪಿಪಿ) ನಿಯಮಾವಳಿ 1978ರ ನಿಯಮ 2(3)ರ ಅನುಸಾರ ಪ್ರಾಚಾರ್ಯರು ದರ್ಜೆ-2/ಸಹಾಯಕ ನಿರ್ದೇಶಕರು (ತರಬೇತಿ) ಹುದ್ದೆಗೆ ಪೂರ್ವಾನ್ವಯವಾಗಿ ಪದೋನ್ನತಿಗೆ ಪರಿಗಣಿಸಿ ಮುಂಬಡ್ತಿ ನೀಡಲಾಗಿದೆ. ಅದರಂತೆಯೇ ಪ್ರಸ್ತಾಪಿತ ಅಧಿಕಾರಿಗಳು ತತ್ಸಂಬಂಧ ಆರ್ಥಿಕ ಸೌಲಭ್ಯಗಳನ್ನೂ ಸಹ ಸದರಿ ದಿನಾಂಕದಿಂದ ಪಡೆಯಲು ಅರ್ಹರಿರುತ್ತಾರೆ.

| ಕ್ರಮ ಸಂಖ್ಯೆ | ಅಧಿಕಾರಿಗಳ ಹೆಸರು | ಕರ್ನಾಟಕ ನಾಗರೀಕ ಸೇವೆಗಳು (ಆರ್‌ಪಿಪಿ) ನಿಯಮಾವಳಿ 1978ರ ನಿಯಮ 2(3)ರನ್ವಯ ಪ್ರಾಚಾರ್ಯರು ದರ್ಜೆ-2/ ಸಮಾನಾಂತರ ಹುದ್ದೆಗೆ ಪೂರ್ವಾನ್ವಯ ಮುಂಬಡ್ತಿಗೆ ಪರಿಗಣಿಸಿದ ಅವಧಿ |
|---|---|---|
| 1 | ನಾರಾಯಣ ಶೆಟ್ಟಿ | 7-4-2003 ರಿಂದ 31-8-2005 ರವರೆಗೆ |
| 2 | ಏಕಾಂತಸ್ವಾಮಿ | 9-4-2003 ರಿಂದ 21-12-2006 ರವರೆಗೆ |
| 3 | ಶರಣಗೌಡ | 7-4-2003 ರಿಂದ 21-12-2006 ರವರೆಗೆ |
| 4 | ಕೆ. ಬಾಲಕೃಷ್ಣ | 9-4-2003 ರಿಂದ 21-12-2006 ರವರೆಗೆ |
| 5 | ಡಿ.ಎಲ್ ಕೃಷ್ಣಮೂರ್ತಿ | 7-4-2003 ರಿಂದ 21-12-2006 ರವರೆಗೆ |
| 6 | ಕೆ. ಚಂದ್ರ | 9-4-2003 ರಿಂದ 21-12-2006 ರವರೆಗೆ |
| 7 | ಶ್ರೀನಿವಾಸಮೂರ್ತಿ (ಪ.ಪಂ) | 9-4-2003 ರಿಂದ 21-12-2006 ರವರೆಗೆ |
| 8 | ಎನ್. ಏಕನಾಥ (ಪ.ಜಾ) | 9-4-2003 ರಿಂದ 21-12-2006 ರವರೆಗೆ |
| 9 | ಕೆ.ಆರ್. ರೇಣುಕಾ | 10-4-2003 ರಿಂದ 21-12-2006 ರವರೆಗೆ |
| 10 | ಮಾಧವ ಪಿ. ಕುಷ್ಟಗಿ | 7-4-2003 ರಿಂದ 21-12-2006 ರವರೆಗೆ |
| 11 | ಬಿ.ಪಿ. ಗೋಸಲದ (ಪ.ಜಾ.) | 9-4-2003 ರಿಂದ 21-12-2006 ರವರೆಗೆ |
| 12 | ಹೆಚ್.ಪಿ. ಶ್ರೀಕಂಠರಾಧ್ಯ | 7-4-2003 ರಿಂದ 21-12-2006 ರವರೆಗೆ |

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 306 ವೆಚ್ಚ-9/06, ದಿನಾಂಕ 30-5-2006ರಲ್ಲಿ ನೀಡಲಾದ ಸಹಮತಿಯ ಮೇರೆಗೆ ಮತ್ತು ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 24 ಸಿಎನ್‌ಎಸ್ 08 ದಿನಾಂಕ 12-6-2008ರ ಮೂಲಕ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1051

**ಕೆ. ಭಾನುಮತಿ**

ಪೀಠಾಧಿಕಾರಿ,

ಕಾರ್ಮಿಕ ಇಲಾಖೆ (ಉದ್ಯೋಗ ಮತ್ತು ತರಬೇತಿ)

**ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ**

**ವಿಷಯ :** 2008-09ನೇ ಸಾಲಿಗೆ ಕಿಯೋನಿಕ್ಸ್ ಸಂಸ್ಥೆಗೆ ಹುಬ್ಬಳ್ಳಿಯ ಮಾಹಿತಿ ತಂತ್ರಜ್ಞಾನ ಪಾರ್ಕ್ ನಿರ್ವಹಣೆಗಾಗಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 24 ಆಡವಿ 2008 ದಿನಾಂಕ 12-6-08.

2. ನಿರ್ದೇಶಕರು (ಆಪರೇಷನ್) ಕಿಯೋನಿಕ್ಸ್ ರವರ ಪತ್ರ ಸಂ: KSEDC/INFRA/ITPH/08-09, ದಿನಾಂಕ 30-6-2008.

**ಪ್ರಸ್ತಾವನೆ :**

2008-09ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ "3451-00-090-2-01 ಮಾತಂ-ಉನ್ನತೀಕರಣ & ಅಭಿವೃದ್ಧಿ 059 ಇತರೆ ಖರ್ಚು (ಯೋಜನೆ)" ರಡಿಯಲ್ಲಿ ರೂ. 600.00 ಲಕ್ಷಗಳ ಅನುದಾನವು ಒದಗಣೆಯಾಗಿದ್ದು, ಅದರಲ್ಲಿ ಹುಬ್ಬಳ್ಳಿ ಮಾಹಿತಿ ತಂತ್ರಜ್ಞಾನ ಪಾರ್ಕ್ ನಿರ್ವಹಣೆಗಾಗಿ ಕಿಯೋನಿಕ್ಸ್ ಸಂಸ್ಥೆಗೆ ರೂ. 30.00 ಲಕ್ಷ (ರೂ. ಮೂವತ್ತು ಲಕ್ಷಗಳು ಮಾತ್ರ) ಗಳ ಅನುದಾನವನ್ನು ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಹಂಚಿಕೆ ಮಾಡಲಾಗಿದೆ.

ನಿರ್ದೇಶಕರು (ಆಪರೇಷನ್) ಕಿಯೋನಿಕ್ಸ್ ಇವರು ಮೇಲೆ (2)ರಲ್ಲಿ ಓದಲಾದ ದಿನಾಂಕ 30-6-2008ರ ಪತ್ರದಲ್ಲಿ ಹುಬ್ಬಳ್ಳಿ ಮಾಹಿತಿ ತಂತ್ರಜ್ಞಾನ ಪಾರ್ಕ್ ನಿರ್ವಹಣೆಗಾಗಿ ಮೇಲೆ (1)ರಲ್ಲಿನ ಸರ್ಕಾರಿ ಆದೇಶದಲ್ಲಿ ಹಂಚಿಕೆಯಾಗಿರುವ ರೂ. 30.00 ಲಕ್ಷಗಳ ಅನುದಾನವನ್ನು ಕಿಯೋನಿಕ್ಸ್ ಸಂಸ್ಥೆಗೆ ಬಿಡುಗಡೆ ಮಾಡಲು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಪ್ರಸ್ತುತ ರೂ. 10.00 ಲಕ್ಷ (ರೂ. ಹತ್ತು ಲಕ್ಷಗಳು ಮಾತ್ರ) ಗಳನ್ನು ಬಿಡುಗಡೆ ಮಾಡಲು ನಿರ್ಧರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 37 ಅಡವಿ 2008, ಬೆಂಗಳೂರು, ದಿನಾಂಕ: 11ನೇ ಜುಲೈ 2008.**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, 2008–09ನೇ ಸಾಲಿಗೆ ಹುಬ್ಬಳ್ಳಿ ಮಾಹಿತಿ ತಂತ್ರಜ್ಞಾನ ಪಾರ್ಕ್ ನಿರ್ವಹಣೆಗಾಗಿ ರೂ. 10.00 ಲಕ್ಷಗಳ (ಹತ್ತು ಲಕ್ಷ ರೂ.ಗಳು ಮಾತ್ರ) ಅನುದಾನವನ್ನು ಕರ್ನಾಟಕ ರಾಜ್ಯ ವಿದ್ಯುನ್ಮಾನ ಅಭಿವೃದ್ಧಿ ನಿಗಮ ನಿಯಮಿತಕ್ಕೆ (ಕಿಯೋನಿಕ್ಸ್) ನೀಡುವ ಸಲುವಾಗಿ ನಿರ್ದೇಶಕರು, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಇಲಾಖೆ ಇವರಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಿದೆ.

ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರು ನಿರ್ದೇಶಕರು ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರ ಮೇಲು ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಸೆಳೆದು (ಡ್ರಾ ಮಾಡಿ) ವಿತರಿಸತಕ್ಕದ್ದು.

ಈ ವೆಚ್ಚವನ್ನು 2008–09ನೇ ಸಾಲಿನಲ್ಲಿ ಲೆಕ್ಕಶೀರ್ಷಿಕೆ "3451–00–090–2–01 ಮಾಹಿತಿ ತಂತ್ರಜ್ಞಾನದ ಉನ್ನತೀಕರಣ ಮತ್ತು ಅಭಿವೃದ್ಧಿ–059–ಇತರೆ ವೆಚ್ಚ (ಯೋಜನೆ)" ಇದರ ಅಡಿಯಲ್ಲಿ ಪ್ರಸಕ್ತ ಸಾಲಿನಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಇವರು ಅನುದಾನದ ಬಳಕೆಯ ಬಗ್ಗೆ ಕರ್ನಾಟಕ ರಾಜ್ಯ ವಿದ್ಯುನ್ಮಾನ ಅಭಿವೃದ್ಧಿ ನಿಗಮ ನಿಯಮಿತ ಸಂಸ್ಥೆಯ ನಿರ್ದೇಶಕರು (ನಿರ್ವಹಣೆ) ರವರಿಂದ ಉಪಯೋಗಿತಾ ದೃಢೀಕರಣ ಪತ್ರವನ್ನು ವೆಚ್ಚ ಮಾಡಿದ ಅನುದಾನದ ವಿವರಗಳ ಜೊತೆಗೆ ಪಡೆದು ಈ ಆರ್ಥಿಕ ವರ್ಷದೊಳಗಾಗಿ ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶಗಳ ಸಂಖ್ಯೆ: ಎಫ್‌ಡಿ 21 ಟಿಎಫ್‌ಪಿ 2006, ದಿನಾಂ 2–9–06, ಇದರನ್ವಯ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1050

**ಎಂ.ವಿ. ಕೃಷ್ಣಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ
ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

## HEALTH AND FAMILY WELFARE SECRETARIAT

**Sub :** Evaluation of Baseline Survey – reg.

**Read :** 1. Govt. Order No. HFW/KHSDRP/Sect-7/2008, Bangalore, dt: 22-1-2008.
2. Corrigendum No. HFW/KHSDRP/Sect-7/2008, Bangalore, dt 13-3-2008.

**Preamble:**

In the Government Order read at (1) above, M/s Population Research Centre, JSS Institute of Economic Research, Vidyagiri, Dharwad have been appointed as Consultants for the Evaluation Baseline Survey for Karnataka Health System Development and Reform Project for Rs. 16,20,000/-. The first instalment i.e., 20% payment after signing the contract and 30% payment i.e., the 2nd instalment after completing 10,000 households, has been made to the Consultant in accordance with the Terms of Reference that form a part of the contract agreement. The firm has completed the survey of next 10,000 households and has requested for payment of third instalment.

The expenditure incurred so far towards this assignment has been debited under the Budget Head "2210-06-800-0-83-059 (Other Expenditure) during the year 2007-08, as per Corrigendum, read at (2) above.

Now it is requested to make the remaining payment to the said firm during the current financial year i.e., 2008-09.

Hence, the following order.

**Govt. Order No. HFW/KHSDRP/Sect-7/2008, Bangalore, Dated 14th July 2008**

Under the circumstances mentioned in the preamble, Government are hereby pleased to approve the 3rd instalment due to M/s. Population Research Centre, JSS Institute of Economic Research,

Vidyagiri, Dharwad for carrying out the assignment for Karnataka Health System Development and Reform Project as per ToRs.

The above expenditure towards payment of 3rd instalment to M/s. Population Research Centre, JSS Institute of Economic Research, Vidyagiri, Dharwad shall be debited under the Budget Head of Account "2210-06-800-0-83-059 (Other Expenditure)" during the year 2008-09.

By order and in the name of the Governor of Karnataka,

PR. 1057

**SUSHAMA GODBOLE**
Deputy Secretary to Government,
KHSDRP
Health and Family Welfare Department.

**ಸಹಕಾರ ಸಚಿವಾಲಯ**

**ವಿಷಯ :** ಕರ್ನಾಟಕ ರಾಜ್ಯ ಪೌರ ಸೇವಾ ನೌಕರರ ಸಂಘ, ಕೇಂದ್ರ ಕಛೇರಿ ಬಳ್ಳಾರಿ ಈ ಸಂಘಕ್ಕೆ ಆಡಳಿತಾಧಿಕಾರಿ ನೇಮಕ ಕುರಿತು.

**ಓದಲಾಗಿದೆ:**
1. ಜಿಲ್ಲಾ ನೊಂದಾಣಾಧಿಕಾರಿ ಬಳ್ಳಾರಿ ಜಿಲ್ಲೆ ರವರ ವರದಿ ಸಂ: ಸಂಘ/65/1980 ದಿ: 1–2–2008.
2. ಸರ್ಕಾರದ ಕಾರಣ ಕೇಳುವ ನೋಟೀಸ್ ಸಂ: ಕಂಇ 01, ಮುನೋಸೊ 2008, ದಿ: 5–5–2008.
3. ಕರ್ನಾಟಕ ರಾಜ್ಯ ಪೌರ ಸೇವಾ ನೌಕರರ ಸಂಘ (ರಿ) ಕೇಂದ್ರ ಕಛೇರಿ ಚಿತ್ರದುರ್ಗ ಶಾಖಾ ಕಛೇರಿ ಬಳ್ಳಾರಿ ಅವರ ಪತ್ರ ಸಂ: ಕರಾಪೌಸೇನೌಸಂ/ಕಾಕೆನೊ/2008–09, ದಿ: 23–5–2008.

**ಪ್ರಸ್ತಾವನೆ :**

ಮೇಲೆ ಓದಲಾದ 1ರಲ್ಲಿ ಜಿಲ್ಲಾ ನೊಂದಣಾಧಿಕಾರಿ, ಬಳ್ಳಾರಿ ಜಿಲ್ಲೆ ಅವರು ವರದಿ ಸಲ್ಲಿಸಿ ಕರ್ನಾಟಕ ರಾಜ್ಯ ಪೌರ ಸೇವಾ ನೌಕರರ ಸಂಘ, ಕೇಂದ್ರ ಕಛೇರಿ ಬಳ್ಳಾರಿಯು ಕರ್ನಾಟಕ ಸಂಘಗಳ ನೊಂದಣಿ ಕಾಯ್ದೆ 1960ರ ಪ್ರಕಾರ ಸಂಘದ ವ್ಯವಹಾರಗಳನ್ನು ಸರಿಯಾಗಿ ನಡೆಸದೆ ಸಂಘವು ನೊಂದಣಿಯಾದಾಗ ಡಾ: ಶ್ರೀ ಕೆ.ಆರ್. ಆಚಾರ್, ಆರೋಗ್ಯ ಅಧಿಕಾರಿಗಳು ನಗರ ಸಭೆ ಬಳ್ಳಾರಿ ರವರು ಸಂಘದ ಅಧ್ಯಕ್ಷರಾಗಿರುತ್ತಾರೆಂದು, ಆದರೆ ಶ್ರೀ ಜಿ.ಎಸ್. ಮಂಜುನಾಥ ರವರು ಅಧ್ಯಕ್ಷರೆಂದು ಕಛೇರಿ ಕಡತದಲ್ಲಿ ಎಲ್ಲಿಯು ಕಂಡು ಬರುವುದಿಲ್ಲವೆಂದು ಕರ್ನಾಟಕ ಸಂಘಗಳ ನೊಂದಣಿ ಅಧಿನಿಯಮ 1960ರ ಕಲಂ 11, 12, 13ರಡಿ ವಾರ್ಷಿಕ ಮಹಾ ಸಭೆ ನಡೆಸಿ ವಾರ್ಷಿಕ ಕಾರ್ಯಕಾರಿ ಮಂಡಳಿ ಸದಸ್ಯರ ಪಟ್ಟಿಗಳನ್ನಾಗಲಿ ಅಥವಾ ಕಂಪನಿ ಕಾಯ್ದೆ 1956ರ ಪ್ರಕರಣ 226ರ ರೀತ್ಯಾ ಲೆಕ್ಕ ಪರಿಶೋಧಕರಿಂದ ನಡೆಸಲಾಗಿರುವ ಪರಿಶೋಧನಾ ವರದಿಗಳನ್ನಾಗಲಿ ಈ ಕಛೇರಿಗೆ ಸಂಘವು ನೊಂದಣಿಯಾದಾಗಿನಿಂದ ಇಲ್ಲಿಯವರಿಗೆ ಸಲ್ಲಿಸಿರುವುದಿಲ್ಲ. ಆದ ಕಾರಣ ಈ ಸಂಘಕ್ಕೆ ಆಡಳಿತಾಧಿಕಾರಿಯನ್ನು ನೇಮಕ ಮಾಡಲು ಶಿಫಾರಸ್ಸು ಮಾಡಿದ ಹಿನ್ನೆಲೆಯಲ್ಲಿ ಸಂಘಕ್ಕೆ ಓದಲಾದ 2ರಲ್ಲಿ ದಿನಾಂಕ: 5–5–2008ರಂದು ಕಾರಣ ಕೇಳುವ ನೋಟಿಸನ್ನು ಜಾರಿ ಮಾಡಲಾಯಿತು. ಇದರಲ್ಲಿ ಕರ್ನಾಟಕ ಸಂಘಗಳ ನೊಂದಣಿ ಕಾಯ್ದೆ 1960ನ್ನು ಉಲ್ಲಂಘನೆ ಮಾಡಿದೆಯೆಂದು ತಿಳಿದುಬಂದು ಕರ್ನಾಟಕ ಸಂಘಗಳ ನೊಂದಣೆ ಕಾಯ್ದೆ 1960ರ ಕಲಂ 27(ಎ) ಪ್ರಕಾರ ಆಡಳಿತಾಧಿಕಾರಿ ನೇಮಕ ಮಾಡುವ ಕ್ರಮ ಜರುಗಿಸಲಾಗುವುದೆಂದು ಸಂಘಕ್ಕೆ ತಿಳಿಸಲಾಗಿತ್ತು. ಓದಲಾದ 3ರ ಪ್ರಕಾರ ಸಂಘದ ಲಿಖಿತ ಹೇಳಿಕೆಯನ್ನು ಪರಿಶೀಲಿಸಿದಾಗ ದಿ: 4–9–1980 ರಂದು ರಾಜ್ಯದ ಎಲ್ಲಾ ನಗರ ಸ್ಥಳೀಯ ಪೌರ ಸೇವಾ ನೌಕರರು ಕರ್ನಾಟಕ ರಾಜ್ಯ ಪೌರ ಸೇವಾ ನೌಕರರ ಸಂಘ ಕೇಂದ್ರ ಕಛೇರಿ ಬಳ್ಳಾರಿ ಎಂದು ಸಂಘ ಸ್ಥಾಪಿಸಿದೆ ಎಂದು ತಿಳಿಸಿರುತ್ತಾರೆ. ಅಲ್ಲದೆ ಇದೇ ಹೆಸರಿನಲ್ಲಿ 1994ರಲ್ಲಿ ಕರ್ನಾಟಕ ರಾಜ್ಯ ಪೌರ ಸೇವಾ ನೌಕರರ ಸಂಘ ಕೇಂದ್ರ ಕಛೇರಿ ಚಿತ್ರದುರ್ಗ ಎಂದು ಸಂಘ ಸ್ಥಾಪಿಸಿಕೊಂಡು ರಿ.ನಂ. 65/80 ಅಂದಿನಿಂದ ಈ ವರೆಗೂ ಶ್ರೀ ಜಿ.ಎಸ್. ಮಂಜುನಾಥ ಎಂಬುವರು ಅಧ್ಯಕ್ಷರಾಗಿದ್ದಾರೆಂದು ತಿಳಿಸುತ್ತಾ ದಿನಾಂಕ: 4–9–1980ರಲ್ಲಿ ಸ್ಥಾಪನೆಯಾದ ಸಂಘವು ಪ್ರಸ್ತುತ ಚಾಲ್ತಿಯಿರುವುದಿಲ್ಲವೆಂಬ ವಿಷಯ ತಿಳಿಸಿರುತ್ತಾರೆ ಓದಲಾದ 1ರಲ್ಲಿನ ಜಿಲ್ಲಾ ನೊಂದಾಣಾಧಿಕಾರಿಯವರ ವರದಿಯನ್ನು ಪರಿಶೀಲಿಸಿದಾಗ ಈ ಸಂಘಕ್ಕೆ ಆಡಳಿತಾಧಿಕಾರಿಯನ್ನು ನೇಮಕ ಮಾಡಲು ಸರ್ಕಾರ ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡಂತೆ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಇ 01 ಸಸಂನೋ 2008 (ಕಂಇ 01 ಮುನೊಸೋ 2008) ಬೆಂಗಳೂರು, ದಿನಾಂಕ: 7ನೇ ಜುಲೈ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯ ಪೌರ ಸೇವಾ ನೌಕರರ ಸಂಘ, ಕೇಂದ್ರ ಕಛೇರಿ, ಬಳ್ಳಾರಿ ಈ ಸಂಘಕ್ಕೆ ಕರ್ನಾಟಕ ಸಂಘಗಳ ನೊಂದಣಿ ಕಾಯ್ದೆ 1960ರ ಕಲಂ 27ಎ ಪ್ರಕಾರ ಸರ್ಕಾರಕ್ಕೆ ನಿಹಿತವಾಗಿರುವ ಅಧಿಕಾರವನ್ನು ಚಲಾಯಿಸಿ, ತಹಸೀಲ್ದಾರ್, ಬಳ್ಳಾರಿ ತಾಲ್ಲೂಕು, ಬಳ್ಳಾರಿ ಜಿಲ್ಲೆ ಇವರನ್ನು

ಆಡಳಿತಾಧಿಕಾರಿಯಾಗಿ 6 (ಆರು) ತಿಂಗಳ ಅವಧಿಗೆ ಅಥವಾ ನಿಗಧಿತ ಸಂಘಕ್ಕೆ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನೇಮಿಸಿದೆ.

ಆಡಳಿತಾಧಿಕಾರಿಗಳು ಸದರಿ ಅವಧಿಯಲ್ಲಿ ಸಂಘದ ಅವ್ಯವಹಾರಗಳನ್ನು ಸರಿಪಡಿಸಿ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1047

**ನಂಜುಂಡಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಹಕಾರ ಇಲಾಖೆ

## HEALTH AND FAMILY WELFARE SECRETARIAT

**Sub :** Delegation of powers regarding settlement of disputes with the contractors – reg.

**Read :** Proceedings of the Projcet Governing Board meeting dt: 29-5-2008.

**Preamble:**

The Karnataka Health System Development and Reform Project requires an inbuilt mechanism to settle disputes regarding civil works with contractors. It is therefore necessary to delegate certain powers to the Project authorities so that disputes are easily resolved. Accordingly, this proposal was placed before the 2nd meeting of the Project Governing Board held on 29-5-2008. The Board approved the same.

Hence, the following order.

**Govt. Order No. HFW/KHSDRP/Sect/Civ-3/2008-09, , Bangalore, Dated 14th July 2008**

Under the circumstances mentioned in the preamble, Government are hereby pleased to delegate the following powers in cases od disputes resolution of civil works taken up by Karnataka Health System Development and Reform Project.

| Sl. No. | Issues | Power delegated to | | |
|---|---|---|---|---|
| | | Project Administrator | Programme Steering Committee | Project Governing Board |
| 1 | To decide on the Adjudicator's decision/ Arbitrator's decision/ award/court decisions | Financial Implications upto 5% of orginal contract price | Financial Implications above 5% and upto 25% of the original contract price | Financial implications above 25% of original contract price |

By order and in the name of the Governor of Karnataka,

PR. 1058

**SUSHAMA GODBOLE**

Deputy Secretary to Government,

KHSDRP,

Health and Family Welfare Department.

## ವಸತಿ ಸಚಿವಾಲಯ

**ವಿಷಯ :** ನರ್ಮ್‌ನ ಬಿಎಸ್‌ಯುಪಿ ಯೋಜನೆಯ ಮೊದಲನೇ ಹಂತದಲ್ಲಿ ಮೈಸೂರು ನಗರದಲ್ಲಿನ 20 ಕೊಳಚೆ ಪ್ರದೇಶಗಳಲ್ಲಿ 2788 ಮನೆಗಳ ನಿರ್ಮಾಣ ಹಾಗೂ ಮೂಲಭೂತ ಸೌಲಭ್ಯ ಒದಗಿಸುವ ಕಾಮಗಾರಿಗಳನ್ನು ಮೈಸೂರು ನಿರ್ಮಿತಿ ಕೇಂದ್ರ ಇವರಿಗೆ ವಹಿಸುವ ಬಗ್ಗೆ.

**ಓದಲಾಗಿದೆ:**
1. ದಿನಾಂಕ 28–5–2008ರಂದು ನಡೆದ ಎಸ್‌ಎಲ್‌ಇಸಿ (ಬಿಎಸ್‌ಯುಪಿ) ಸಭೆಯ ನಡವಳಿ.
2. ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ ಇವರ ಅ.ಸ.ಪತ್ರ ಸಂಖ್ಯೆ: ಕಕೊನಿಮ : ಆಯುಕ್ತರು–ಬಿಎಸ್‌ಯುಪಿ–ನರ್ಮ್/ಎಂವೈಎಸ್/2008–09, ದಿನಾಂಕ 1–7–2008.
3. ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)ಯ ಅಧಿಸೂಚನೆ ಸಂಖ್ಯೆ: ಲೋಇ/281/ಆಕೋ–3/08, ದಿನಾಂಕ 4–7–2008.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ನಡವಳಿಯಂತೆ, ದಿನಾಂಕ 28–5–2008ರಂದು ನಡೆದ ಎಸ್‌ಎಲ್‌ಇಸಿ (ಬಿಎಸ್‌ಯುಪಿ) ಸಭೆಯಲ್ಲಿ ಪ್ರಧಾನ ಕಾರ್ಯದರ್ಶಿ, ವಸತಿ ಇಲಾಖೆ ಇವರಿಗೆ ಮೈಸೂರು ಬಿಎಸ್‌ಯುಪಿ ಯೋಜನೆಯನ್ನು

ಕೆಎಸ್‌ಪಿಹೆಚ್‌ಸಿ/ನಿರ್ಮಿತಿ ಕೇಂದ್ರ ಇವರಿಗೆ ವಹಿಸುವ ಮೊದಲು ಕೆಟಿಪಿಪಿ ನಿಯಮದಿಂದ ವಿನಾಯಿತಿ ಪಡೆಯುವ ಬಗ್ಗೆ ಕ್ರಮ ವಹಿಸಲು ಸೂಚಿಸಲಾಗಿತ್ತು. ಅಲ್ಲದೇ, ಮನೆಗಳ ನಿರ್ಮಾಣದ ಜೊತೆಗೆ ಮೂಲಭೂತ ಸೌಲಭ್ಯಗಳನ್ನು ಒದಗಿಸುವ ಬಗ್ಗೆಯೂ ಕ್ರಮ ವಹಿಸಲು ತಿಳಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿ ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ ಇವರು ಸರ್ಕಾರಕ್ಕೆ ಬರೆದ ಅರೆ ಸರ್ಕಾರಿ ಪತ್ರದಲ್ಲಿ ನರ್ಮ್-ಬಿಎಸ್‌ಯುಪಿ ಯೋಜನೆಯಡಿ ಮೈಸೂರು ನಗರದ ಮೊದಲನೇ ಹಂತದಲ್ಲಿ 2788 ಮನೆಗಳ ನಿರ್ಮಾಣ ಹಾಗೂ ಮೂಲಭೂತ ಸೌಲಭ್ಯ ಒದಗಿಸುವ ಕಾಮಗಾರಿಗಳನ್ನು ಕರ್ನಾಟಕ ರಾಜ್ಯ ಪೊಲೀಸ್ ಗೃಹ ನಿರ್ಮಾಣ ನಿಗಮ/ನಿರ್ಮಿತಿ ಕೇಂದ್ರ ಸಂಸ್ಥೆಗಳಿಗೆ ರೂ. 1.80 ಲಕ್ಷಗಳ ಘಟಕ ವೆಚ್ಚದಂತೆ (ಮನೆಗಳ ಕಾಮಗಾರಿಗಳಿಗೆ) ವಹಿಸಲು ದಿನಾಂಕ 28-5-2008ರಂದು ನಡೆದ ಸಭೆಯಲ್ಲಿ ತೀರ್ಮಾನಿಸಲಾಗಿರುವುದರಿಂದ, ಸದರಿ ಕಾಮಗಾರಿಗಳನ್ನು ನಿರ್ಮಿತಿ ಕೇಂದ್ರದವರಿಗೆ ವಹಿಸುವ ಬಗ್ಗೆ ಸರ್ಕಾರದ ಆದೇಶವನ್ನು ನೀಡಬೇಕೆಂದು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಅಧಿಸೂಚನೆಯಲ್ಲಿ ಆರ್ಥಿಕ ಇಲಾಖೆಯು ನಿರ್ಮಿತಿ ಕೇಂದ್ರಕ್ಕೆ ಅಥವಾ ಕಾರ್ನಿಕ್ ಸಂಸ್ಥೆಗೆ ಸರ್ಕಾರದ ವಿವಿಧ ಇಲಾಖೆಯ ಕಾಮಗಾರಿಗಳನ್ನು ವಹಿಸಲು ಕೈಗೊಳ್ಳುವ ಸಂದರ್ಭದಲ್ಲಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, 2008-09ನೇ ಸಾಲಿಗೆ ಮತ್ತೆ ಒಂದು ವರ್ಷಕ್ಕೆ ವಿನಾಯಿತಿ ನೀಡಿ ಅಧಿಸೂಚನೆ ಹೊರಡಿಸಲಾಗಿರುತ್ತದೆ.

ಸರ್ಕಾರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 25 ಕೊಮಂಲೆ 2008, ಬೆಂಗಳೂರು, ದಿನಾಂಕ: 11ನೇ ಜುಲೈ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ರಾಜ್ಯದ ಎಲ್ಲಾ ನಿರ್ಮಿತಿ ಕೇಂದ್ರಗಳು ಸರ್ಕಾರದ ವಿವಿಧ ಇಲಾಖೆಯ ಕಾಮಗಾರಿಗಳನ್ನು ಕೈಗೊಳ್ಳುವುದಕ್ಕೆ ಸಂಬಂಧಿಸಿದಂತೆ, ಕರ್ನಾಟಕ ಸಾರ್ವಜನಿಕ ಸಂಗ್ರಹಣೆ ಪಾರದರ್ಶಕತೆ ಅಧಿನಿಯಮ 1999ರ ಕಲಂ 4(ಜಿ)ರಡಿ 2008-09ನೇ ಸಾಲಿಗೆ ಒಂದು ವರ್ಷಕ್ಕೆ ವಿನಾಯಿತಿ ಪಡೆದಿರುವುದರಿಂದ, ಆಯುಕ್ತರು ಬಿಎಸ್‌ಯುಪಿ ಮೊದಲನೇ ಹಂತದ ಮೈಸೂರು ಯೋಜನೆಯನ್ನು ನಿರ್ಮಿತಿ ಕೇಂದ್ರಕ್ಕೆ ವಹಿಸುವ ಬಗ್ಗೆ ದಿನಾಂಕ 28-5-2008ರಂದು ನಡೆದ ಎಸ್‌ಎಲ್‌ಇಸಿ (ಬಿಎಸ್‌ಯುಪಿ) ಸಭೆಯಲ್ಲಿ ತೀರ್ಮಾನಿಸಿದಂತೆ, ಸರ್ಕಾರಕ್ಕೆ ಸಲ್ಲಿಸಿರುವ ಪ್ರಸ್ತಾವನೆಯ ಹಿನ್ನಲೆಯಲ್ಲಿ ಬಿಎಸ್‌ಯುಪಿ ಮೊದಲನೇ ಹಂತದ ಮೈಸೂರು ಯೋಜನೆಯ 2788 ಮನೆಗಳ ನಿರ್ಮಾಣ ಹಾಗೂ ಮೂಲಭೂತ ಸೌಲಭ್ಯ ಒದಗಿಸುವ ಕಾಮಗಾರಿಗಳನ್ನು ಮೈಸೂರು ನಿರ್ಮಿತಿ ಕೇಂದ್ರಕ್ಕೆ ವಹಿಸಬೇಕೆಂದು ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ ಆಯುಕ್ತರಿಗೆ ಆದೇಶಿಸಿದೆ.

ಕರ್ನಾಟಕ ಸರ್ಕಾರದ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1070

**ಜಿ.ಆರ್. ನಾಗರಾಜ**

ಪೀಠಾಧಿಕಾರಿ-4, ವಸತಿ ಇಲಾಖೆ

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಕೊಠಡಿಯಲ್ಲಿ ದಿನಾಂಕ 20-6-2008ರಂದು ನಡೆದ ಕಾರ್ಯದರ್ಶಿಗಳ ಸಮಿತಿಯ ಮೊದಲ ಸಭೆಯ ನಡವಳಿಗಳು**

**ಸಿಆಸುಇ 22 ಆಸಪ 2007, ದಿನಾಂಕ 16ನೇ ಜುಲೈ 2008**

**ಹಾಜರಿದ್ದ ಅಧಿಕಾರಿಗಳ ಪಟ್ಟಿಯನ್ನು ಅನುಬಂಧದಲ್ಲಿ ಲಗತ್ತಿಸಿದೆ.**

ಮುಖ್ಯ ಕಾರ್ಯದರ್ಶಿಯವರು ಹಾಜರಿದ್ದ ಸದಸ್ಯರು ಹಾಗೂ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳನ್ನು ಸ್ವಾಗತಿಸಿದರು. ಕಾರ್ಯದರ್ಶಿಗಳ ಸಮಿತಿಯ ರಚನೆಯ ಉದ್ದೇಶವನ್ನು ಸಭೆಗೆ ವಿವರಿಸಲಾಯಿತು ಮತ್ತು ಎರಡಕ್ಕಿಂತ ಹೆಚ್ಚು ಇಲಾಖೆಗಳಿಗೆ ಸಂಬಂಧಿಸಿದ ಮತ್ತು ಭಿನ್ನ ಅಭಿಪ್ರಾಯಗಳನ್ನು ಹೊಂದಿರುವ ವಿಷಯಗಳನ್ನು ಪರಿಗಣಿಸಿ ಸಮಸ್ಯೆ ಬಗೆಹರಿಸಲು ಈ ಸಮಿತಿಯಿಂದ ಸಾಧ್ಯವಾಗುವುದೆಂಬ ಆಶಾ ಭಾವನೆಯನ್ನು ವ್ಯಕ್ತಿಪಡಿಸಲಾಯಿತು.

**1. ಹಳೆ ಮೈಸೂರು ಪ್ರಾಂತ್ಯದ ಐತಿಹಾಸಿಕ ಹಾಗೂ ಆಡಳಿತಾತ್ಮಕ ಸಂಪ್ರದಾಯಗಳನ್ನು ಸಂರಕ್ಷಿಸುವ ಬಗ್ಗೆ :**

ಇಂಧನ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರು ವಿಷಯದ ಹಿನ್ನೆಲೆಯನ್ನು ವಿವರಿಸುತ್ತಾ, ರಾಜ್ಯ ಪತ್ರಾಗಾರ ಇಲಾಖೆ, ಪ್ರಾಚ್ಯವಸ್ತು ನಿರ್ದೇಶನಾಲಯ, ವಸ್ತುಸಂಗ್ರಹಾಲಯಗಳು ಮತ್ತು ಪರಂಪರೆ ಹಾಗೂ ರಾಜ್ಯಪತ್ರ ಸಂಕಲನಾಲಯಗಳು, ಅಪರೂಪದ ಸ್ಮಾರಕಗಳು ಹಾಗೂ ರಾಜ್ಯಪತ್ರಗಳ ಸಂರಕ್ಷಣೆ, ಪ್ರಕಟಣೆ ಹಾಗೂ ಪ್ರಾತ್ಯಕ್ಷಿಕೆ ಇನ್ನಿತರ ಕಾರ್ಯಗಳನ್ನು ನಿರ್ವಹಿಸುತ್ತಿದ್ದು, ಇನ್ನೂ ಬಹಳಷ್ಟು ಕಾರ್ಯ ಬಾಕಿ ಇರುತ್ತದೆ. ಲಭ್ಯವಿರುವ ಮೂಲ ದಾಖಲೆಗಳನ್ನು ಡಿಜಿಟಲೈಸ್ ಮಾದರಿಯಲ್ಲಿ ಅಳವಡಿಸುವುದು ಹಾಗೂ ಪ್ರಾಮುಖ್ಯತೆ ಪಡೆದ ಐತಿಹಾಸಿಕ ದಾಖಲೆಗಳನ್ನು ಪಡೆಯುವುದು ಮತ್ತು ಸಾಮಾನ್ಯವಾಗಿ ಕರ್ನಾಟಕ ರಾಜ್ಯಕ್ಕೆ ಸಂಬಂಧಿಸಿದ ಹಾಗೂ ರಾಜವಂಶದ ಆಡಳಿತ ವ್ಯಾಪ್ತಿಗೊಳಪಟ್ಟ ಮೈಸೂರು ರಾಜ್ಯ

ಪ್ರದೇಶಕ್ಕೆ ಸಂಬಂಧಿಸಿದ್ದು, ಚೆನ್ನೈ, ಹೈದರಾಬಾದ್‌ನ ರಾಜ್ಯ ಪತ್ರಾಗಾರಗಳು, ಭಾರತ ರಾಷ್ಟ್ರೀಯ ಪತ್ರಾಗಾರ, ಏಶಿಯಾಟಿಕ್ ಸೊಸೈಟಿ, ಕೋಲ್ಕತ್ತ, ಡೆಕ್ಕನ್ ಕಾಲೇಜು ಪುಣೆ, ಪ್ಯಾರಿಸ್‌ನ ರಾಷ್ಟ್ರೀಯ ಪತ್ರಾಗಾರ ಮತ್ತಿತರ ಯುರೋಪಿಯನ್ ರಾಷ್ಟ್ರಗಳು, ಲಂಡನ್ನಿನ ಹಾಗೂ ಪ್ಯಾರಿಸ್ಸಿನ ರಾಯಲ್ ಏಶಿಯಾಟಿಕ್ ಸೊಸೈಟಿಗಳಲ್ಲಿ ಮತ್ತು ಇಂಡಿಯಾ ಆಫೀಸ್ ಲೈಬ್ರರಿಗಳಲ್ಲಿ ಲಭ್ಯವಿರುವುದನ್ನು ಸಂಗ್ರಹಿಸುವುದರ ಅಗತ್ಯತೆಯನ್ನು ಹಾಗೂ ಅವುಗಳನ್ನು ಕರ್ನಾಟಕ ರಾಜ್ಯ ಪತ್ರಾಗಾರದಲ್ಲಿ ಸಂಶೋಧಕರ ಉಪಯೋಗಕ್ಕೆ ಲಭ್ಯವಾಗುವಂತೆ ಮಾಡುವ ಅವಶ್ಯಕತೆಯನ್ನು ವಿವರಿಸಿದರು.

**ಚರ್ಚೆಯ ನಂತರ ಈ ಕೆಳಕಂಡ ನಿರ್ಧಾರಗಳನ್ನು ತೆಗೆದುಕೊಳ್ಳಲಾಯಿತು :**

1) ಈ ಕೆಳಗಿನ ಅಪರೂಪದ ಕೃತಿಗಳನ್ನು ಪ್ರಕಟಿಸುವುದು ;

ಅ) ಸರ್ ಫ್ರಾನ್ಸಿಸ್ ಬುಕಾನನ್ ವಿರಚಿತ 1802ರಲ್ಲಿ ಪ್ರಕಟವಾಗಿದ್ದ 'ಎ ಜರ್ನಿ ಥ್ರೂ ಮೈಸೂರ್ ಅಂಡ್ ಮಲಬಾರ್' ನಾಮಾಂಕಿತ ಪ್ರವಾಸ ಕಥನ ;

ಆ) 'ಜ್ಯೂವೆಲ್ಸ್ ಆಫ್ ಅಡ್ಮಿನಿಸ್ಟ್ರೇಷನ್'ನ ಎರಡು ಸಂಪುಟಗಳು ;

(ಮೈಸೂರಿನ ದಿವಾನರುಗಳ ಸಾಧನೆ ಮತ್ತು ಕೊಡುಗೆಗಳಿಗೆ ಸಂಬಂಧಿಸಿದವು)

ಇ) 1960ರ ಎಐಸಿಸಿ ಅಧಿವೇಶನ ಸಮಯದಲ್ಲಿ ಪ್ರಕಟಿಸಲಾದ 'ಗ್ಲಿಂಪ್ಸಸ್ ಆಫ್ ಕರ್ನಾಟಕ' ನಾಮಾಂಕಿತ ಲಾಫಿ ಟೇಬಲ್ ಪುಸ್ತಕ (ರಾವ್ ಬಹದ್ದೂರ್ ಶ್ರೀ ಸಿ. ಹಯವದನರಾವ್ ರವರಿಂದ ಸಂಕಲಿಸಲ್ಪಟ್ಟ ಕೃತಿ) ಮತ್ತು ತುಮಕೂರು, ಕೋಲಾರ, ಶಿವಮೊಗ್ಗ ಹಾಗೂ ಚಿತ್ರದುರ್ಗ ಜಿಲ್ಲಾ ವಾರ್ತಾ ಪತ್ರಗಳಲ್ಲಿ ಮುದ್ರಿತವಾಗದಿರುವ ಹಸ್ತ ಪ್ರತಿಗಳು ಹಾಗೂ ಕರ್ನಾಟಕ ರಾಜ್ಯ ಪತ್ರಾಗಾರವು ಕೈಗೆತ್ತಿಕೊಳ್ಳುವ ಎಲ್ಲಾ ಕೆಲಸಗಳು (ಅಂದಾಜು ವೆಚ್ಚ ರೂ. 50.00 ಲಕ್ಷಗಳು)

2) ಮೈಸೂರು ನಗರದ ಪಾರಂಪರಿಕ ಕಟ್ಟಡಗಳು, ಸಯ್ಯಾಜಿರಾವ್ ರಸ್ತೆಯಲ್ಲಿರುವ ಚಾಮರಾಜೇಂದ್ರ ತಂತ್ರಜ್ಞಾನ ಸಂಸ್ಥೆಯ ಕಟ್ಟಡ, ಮೈಸೂರು ನಗರದ ಪಾರಂಪರಿಕ ಪ್ರದೇಶದ ಮಧ್ಯಭಾಗದ ಪ್ರದೇಶವನ್ನು (ಮೈಸೂರು ಅರಮನೆಯ ಸುತ್ತಮುತ್ತಲ 3 ಕಿ.ಮೀ. ಒಳಗಿನ ಪ್ರದೇಶ) ಸಂರಕ್ಷಿಸುವುದಕ್ಕೆ ಸೂಕ್ತ ಕ್ರಮ ತೆಗೆದುಕೊಳ್ಳುವುದು ಮತ್ತು ಈ ಕಾರ್ಯವನ್ನು ಆಯುಕ್ತರು, ಹೆರಿಟೇಜ್ ಇಲಾಖೆ ಇವರು ನಿರ್ವಹಿಸತಕ್ಕದ್ದು. (ಯೋಜಿತ ಅಂದಾಜು ವೆಚ್ಚ ರೂ. 3.00 ಕೋಟಿಗಳು)

3) ಕರ್ನಾಟಕ ರಾಜ್ಯಪತ್ರ, ರಾಜ್ಯ ಪ್ರಾಚ್ಯವಸ್ತು ಮತ್ತು ವಸ್ತು ಸಂಗ್ರಹಾಲಯಗಳು ಶೈಕ್ಷಣಿಕ ಸ್ವರೂಪದವುಗಳಾಗಿದ್ದು ಕಡಿಮೆ ಆಯವ್ಯಯ ಅನುದಾನದಡಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿವೆ ಮತ್ತು ಬಹಳ ಕಾಲದಿಂದ ಖಾಲಿ ಇರುವ ಹುದ್ದೆಗಳಿಗೆ ನೇಮಕಾತಿ ಇಲ್ಲದಿರುವುದರಿಂದಾಗಿ ವಿರಳ ಸಿಬ್ಬಂದಿಗಳಿಂದ ಕಾರ್ಯ ನಿರ್ವಹಿಸಲ್ಪಡುತ್ತಿವೆ. ಆದುದರಿಂದ ಸಂಬಂಧಿಸಿದ ಇಲಾಖೆಗಳಿಗೆ ಸೂಕ್ತ ನಿರ್ದೇಶನ ನೀಡಿ ಅರ್ಹತೆಯುಳ್ಳ ಅವಶ್ಯ ಸಿಬ್ಬಂದಿಯನ್ನು ನೇಮಕಾತಿ ಮಾಡಲು ಮತ್ತು ವಿದ್ವಾಂಸರನ್ನು ಗುತ್ತಿಗೆ ಆಧಾರದ ಮೇಲೆ ನೇಮಕಾತಿ ಮಾಡಲು ನಿರ್ದೇಶನ ನೀಡಬಹುದು;

4) ಕರ್ನಾಟಕ ರಾಜ್ಯಪತ್ರ, ಪ್ರಾಚ್ಯವಸ್ತು ಇಲಾಖೆ ಹಾಗೂ ಸಂಗ್ರಹಾಲಯಗಳಿಗೆ ಹೆಚ್ಚು ಅನುದಾನ ಒದಗಿಸುವುದು ;

5) ಚಿತ್ರಕಲಾ ಪರಿಷತ್ ನಂತಹ ಪ್ರಮುಖ ಸಂಸ್ಥೆಯನು ಪ್ರಾಚ್ಯವಸ್ತು ಸಂಬಂಧಿತ ಪಠ್ಯಕ್ರಮಗಳಲ್ಲಿ ತರಬೇತಿ ನೀಡಲು ಉತ್ತೇಜಿಸುವುದು ;

**2) ಸಚಿವಾಲಯ/ರಾಜ್ಯ ಸಾರ್ವಜನಿಕ ಉದ್ದಿಮೆಗಳಲ್ಲಿ ಆಂತರಿಕ ವಿಚಕ್ಷಣಾ ದಳ ವ್ಯವಸ್ಥೆಯನ್ನು ರಚಿಸುವುದು :**

ಕಾರ್ಯದರ್ಶಿ, ಸಿಆಸುಇ (ಆಸು)ರವರು ಸನ್ಮಾನ್ಯ ಲೋಕಾಯುಕ್ತರು ದಿನಾಂಕ 12–2–2008ರ ಪತ್ರ ಸಂ: ಎಲ್‌ಒಕೆಪಿಎಸ್ 231/2007–08ರಲ್ಲಿ ಅಂದಿನ ರಾಜ್ಯಪಾಲರ ಸಲಹೆಗಾರರಿಗೆ ಪತ್ರ ಬರೆದು, ರಾಜ್ಯ ಸರ್ಕಾರವು ಭ್ರಷ್ಟಾಚಾರವನ್ನು ತಡೆಯಲು ಒಂದು ಆಂತರಿಕ ವಿಚಕ್ಷಣಾ ದಳ ವ್ಯವಸ್ಥೆಯನ್ನು ಹೊಂದುವ ಬಗ್ಗೆ ಪ್ರಸ್ತಾಪಿಸಿರುವುದನ್ನು ಸಭೆಯ ಗಮನಕ್ಕೆ ತಂದರು. ಅದರಂತೆ, ಸಚಿವಾಲಯದಲ್ಲಿ ಎಲ್ಲ ಇಲಾಖೆಗಳಲ್ಲಿ ಉಪ ಕಾರ್ಯದರ್ಶಿ ದರ್ಜೆಗಿಂತ ಕಡಿಮೆ ಇಲ್ಲದ ಅಧಿಕಾರಿಯನ್ನು ವಿಚಕ್ಷಣ ಅಧಿಕಾರಿ ಎಂದು ಹೆಸರಿಸಲು ತೀರ್ಮಾನಿಸಲಾಯಿತು. ಚರ್ಚೆಯ ನಂತರ ಮುಖ್ಯ ಕಾರ್ಯದರ್ಶಿಯವರು ಈ ವಿಷಯವಾಗಿ ಲೋಕಾಯುಕ್ತರೊಂದಿಗೆ ಚರ್ಚಿಸಿದ ನಂತರ ಅಂತಿಮ ಆದೇಶ ಹೊರಡಿಸತಕ್ಕದ್ದು ಎಂದು ತೀರ್ಮಾನಿಸಲಾಯಿತು.

**3) ನಿರ್ಮಲ ಗುಜರಾತ್ ಮಾದರಿಯಲ್ಲಿ ನಿರ್ಮಲ ಕರ್ನಾಟಕ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸುವುದು.**

ಈ ವಿಷಯವನ್ನು ಯೋಜನಾ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರು ಪರಿಚಯಿಸಿದರು. ಸಮಿತಿಯ ಈ ವಿಷಯವನ್ನು ರಾಜ್ಯ ಸರ್ಕಾರವು ಪರಿಗಣಿಸಲೇ ಬೇಕಾಗಿರುವ ವಿಷಯ ಎಂದು ಅಭಿಪ್ರಾಯಪಟ್ಟಿತು. ಈ ವಿಷಯವು ಒಂದು ಪ್ರಮುಖ ಕಾರ್ಯ ನೀತಿ ಯೋಜನೆಯಾಗಿದ್ದು, ಇದಕ್ಕೆ ದೃಢ ಹಾಗೂ ನಿರಂತರ ರಾಜಕೀಯ ಬೆಂಬಲ ಅಗತ್ಯತೆ

ಇರುವುದರಿಂದ ಈ ವಿಷಯದ ಬಗ್ಗೆ ಮಾನ್ಯ ಮುಖ್ಯಮಂತ್ರಿಗಳ ಮುಂದೆ ಒಂದು ಪ್ರಾತ್ಯಕ್ಷಿಕೆಯನು ಮಂಡಿಸಿ ನಂತರ ವಿಷಯವನ್ನು ಮುಂದುವರಿಸಲು ತೀರ್ಮಾನಿಸಲಾಯಿತು.

ಅಧ್ಯಕ್ಷರಿಗೆ ವಂದನೆ ಸಲ್ಲಿಸುವುದರೊಂದಿಗೆ ಸಭೆಯು ಮುಕ್ತಾಯಗೊಂಡಿತು.

**ಸುಧಾಕರ ರಾವ್**
ಸರ್ಕಾರದ ಮುಖ್ಯ ಕಾರ್ಯದರ್ಶಿಗಳು,

**ರಮೇಶ್ ಝುಳಕಿ**
ಸರ್ಕಾರದ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಆಡಳಿತ ಸುಧಾರಣೆ)

**ದಿನಾಂಕ 20-6-2008ರಂದು ಸರ್ಕಾರ ಮುಖ್ಯ ಕಾರ್ಯದರ್ಶಿಯವರ ಕೊಠಡಿಯಲ್ಲಿ ನಡೆದ ಕಾರ್ಯದರ್ಶಿಗಳ ಸಮಿತಿಯ ಮೊದಲ ಸಭೆಯಲ್ಲಿ ಹಾಜರಿದ್ದ ಅಧಿಕಾರಿಗಳ ಪಟ್ಟಿ**

1. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು
2. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ
3. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಇಂಧನ ಇಲಾಖೆ
4. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಯೋಜನೆ ಮತ್ತು ಸಾಂಖ್ಯಿಕ ಇಲಾಖೆ
5. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕನ್ನಡ ಮತ್ತು ಸಂಸ್ಕೃತ ಇಲಾಖೆ
6. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಶಿಕ್ಷಣ ಇಲಾಖೆ
7. ಸರ್ಕಾರದ ಕಾರ್ಯದರ್ಶಿಗಳು, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ)
8. ಸರ್ಕಾರದ ಕಾರ್ಯದರ್ಶಿಗಳು, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
9. ನಿರ್ದೇಶಕರು, ಪ್ರಾಚ್ಯವಸ್ತು ಸಂಗ್ರಹಾಲಯ
10. ಸಂಕಲನಕಾರರು, ಕರ್ನಾಟಕ ರಾಜ್ಯಪತ್ರ

**ರಮೇಶ್ ಝುಳಕಿ**
ಪಿ.ಆರ್. 1068 ಸರ್ಕಾರದ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಆಡಳಿತ ಸುಧಾರಣೆ)

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ವಿಷಯ :** ಧಾರವಾಡದ ಕರ್ನಾಟಕ ಮಾನಸಿಕ ಆರೋಗ್ಯ ಸಂಸ್ಥೆಯಲ್ಲಿ ಸೈಕಿಯಾಟ್ರಿಕ್ ಸೋಷಿಯಲ್ ವರ್ಕರ್ ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಸಿಬ್ಬಂದಿಯ ವೇತನ ಶ್ರೇಣಿಯನ್ನು ಪರಿಷ್ಕರಿಸುವ ಬಗ್ಗೆ.

**ಓದಲಾಗಿದೆ:**
1. ದಿನಾಂಕ 19-8-2004 ಸಂಖ್ಯೆ ಆಕುಕ 29 ಕೆವಿಎಮ 2004ರ ಸರ್ಕಾರಿ ಆದೇಶ.
2. ದಿನಾಂಕ 1-6-2006 ಸಂಖ್ಯೆ: ಕಿಮ್ಸ್/ಸಿಬ್ಬಂದಿ/191/2006-07ರ ಹುಬ್ಬಳ್ಳಿಯ ಕಿಮ್ಸ್‌ನ ನಿರ್ದೇಶಕರ ಪತ್ರ.
3. ದಿನಾಂಕ 20-7-2006 ಸಂಖ್ಯೆ: ಆಕುಕ 50 ಕೆವಿಎಂ 2006ರ ಸರ್ಕಾರಿ ಪತ್ರ.
4. ದಿನಾಂಕ 11-9-2006 ಸಂಖ್ಯೆ: ಟಿಇಟಿ/89-6-07ರ ಆ.ಕು.ಕ. ಸೇವೆಗಳ ನಿರ್ದೇಶಕರ ಪತ್ರ.

**ಪ್ರಸ್ತಾವನೆ :**

1) ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸೈಕಿಯಾಟ್ರಿಕ್ ಸೋಷಿಯಲ್ ವರ್ಕರ್ಸ್ ಹಾಗೂ ಕ್ಲಿನಿಕಲ್ ಸೈಕಾಲಜಿಸ್ಟ್ಸ್ ಹುದ್ದೆಗಳೂ ಸೇರಿದಂತೆ ಇತರ ವೃಂದದ ಸಿಬ್ಬಂದಿಗಳಿಗೆ ವೇತನ ಶ್ರೇಣಿಯನ್ನು ಹಂಚಿಕೆ ಮಾಡಿ ಆದೇಶ ಹೊರಡಿಸಲಾಗಿದೆ. ಅದರಂತೆ ಈ ಕೆಳಕಂಡ ಹುದ್ದೆಗಳಿಗೆ ವೇತನ ಶ್ರೇಣಿ ಈ ಕೆಳಗಿನಂತೆ ಹಂಚಿಕೆ ಮಾಡಲಾಗಿದೆ.

| Sl.No. | Category of Posts | Pay Scale |
|---|---|---|
| 1 | Psychiatrists | 7400-13120 |
| 2 | GDMO | 7400-13120 |

| Sl.No. | Category of Posts | Pay Scale |
|---|---|---|
| 3 | Clinical Psychologist | 7400-13120 |
| 4 | Psychiatric Social Worker | 4150-7800 |
| 5 | Staff Nurse | 4575-8400 |
| 6 | Ward Attenders | 2500-3850 |
| 7 | Dietician | 4575-8400 |
| 8 | Medical Record Officer | 6300-11840 |
| 9 | Occupational Therapist | 4575-8400 |
| 10 | Occupational Instructor | 4575-8400 |
| 11 | Data Entry Operator/Computer Operator | 3850-7050 |
| 12 | Drivers | 3500-5450 |
| 13 | Pharmacist | 3850-7050 |
| 14 | EEG/ECG Technician | 4150-7800 |

2) ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಧಾರವಾಡದ ಕರ್ನಾಟಕ ಮಾನಸಿಕ ಆರೋಗ್ಯ ಸಂಸ್ಥೆಯಲ್ಲಿ ಸೈಕಿಯಾಟ್ರಿಕ್ ಸೋಷಿಯಲ್ ವರ್ಕರ್ ಆಗಿ ಕಾರ್ಯ ನಿರ್ವಹಿಸುತ್ತಿರುವ 6 ಜನ ನೌಕರರುಗಳು ಎಂ.ಎಸ್.ಡಬ್ಲ್ಯೂ.ನಲ್ಲಿ ಸ್ನಾತಕೋತ್ತರ ಪದವಿಯನ್ನು ಹೊಂದಿದ್ದು, ಅವರಿಗೆ 4150–7500 ವೇತನ ಶ್ರೇಣಿಯನ್ನು ಹಂಚಿಕೆ ಮಾಡಿದ್ದು, ಅದೇ ರೀತಿ ತತ್ಸಮಾನ ಪದವಿಯನ್ನು ಹೊಂದಿದ್ದು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಸೈಕಿಯಾಟ್ರಿ ಸೋಷಿಯಲ್ ವರ್ಕರ್‌ರವರಿಗೆ ರೂ. 6000–11200 ವೇತನ ಶ್ರೇಣಿಯನ್ನು ಹಂಚಿಕೆ ಮಾಡಿರುವುದರಿಂದ, ಈ ತಾರತಮ್ಯವನ್ನು ಸರಿಪಡಿಸುವಂತೆ ಕೋರಿಕೊಂಡಿದ್ದು, ಅದನ್ನು ಕಿಮ್ಸ್‌ನ ನಿರ್ದೇಶಕರು ಸರ್ಕಾರಕ್ಕೆ ಸೂಕ್ತ ಕ್ರಮಕ್ಕಾಗಿ ಶಿಫಾರಸ್ಸು ಮಾಡಿರುತ್ತಾರೆ.

3) ಮೇಲೆ (4)ರಲ್ಲಿ ಓದಲಾದ ಸರ್ಕಾರಿ ಪತ್ರದಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯಲ್ಲಿನ ಕ್ಲಿನಿಕಲ್ ಸೈಕಲಾಜಿಸ್ಟ್ ಮತ್ತು ಸೈಕಿಯಾಟ್ರಿಕ್ ಸೋಷಿಯಲ್ ವರ್ಕರ್ ಎರಡೂ ಹುದ್ದೆಗಳ ವೇತನ ಶ್ರೇಣಿ ರೂ. 6000–11200ನ್ನು ನೀಡಲಾಗಿದ್ದು, ಹುಬ್ಬಳ್ಳಿಯಲ್ಲಿನ ಕಿಮ್ಸ್ ಆಸ್ಪತ್ರೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಸೈಕಿಯಾಟ್ರಿಕ್ ವರ್ಕರ್ ಹುದ್ದೆಗೆ ರೂ. 4150–7800 ವೇತನ ಶ್ರೇಣಿ ನಿಗಧಿಪಡಿಸಿರುವುದರಿಂದ ಮತ್ತು ಅವರುಗಳು ಸ್ನಾತಕೋತ್ತರ ಪದವಿ ಹೊಂದಿರುವುದರಿಂದ, ಅವರಿಗೂ ಸಹ ವೇತನ ಶ್ರೇಣಿ ರೂ. 6000–11200ನ್ನು ನಿಗಧಿಪಡಿಸಿ ವೇತನ ಶ್ರೇಣಿಯಲ್ಲಿ ಆಗಿರುವ ತಾರತಮ್ಯ ಸರಿಪಡಿಸಲು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶಕರ ಅಭಿಪ್ರಾಯ ಕೋರಲಾಗಿತ್ತು.

4) ಮೇಲೆ (4)ರಲ್ಲಿ ಓದಲಾದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶಕರ ಪತ್ರದಲ್ಲಿ ಕ್ಲಿನಿಕಲ್ ಸೈಕಾಲಜಿಸ್ಟ್ ಮತ್ತು ಸೈಕಿಯಾಟ್ರಿಕ್ ಸೋಷಿಯಲ್ ವರ್ಕರ್ಸ್ ಹುದ್ದೆಗಳ ವೇತನ ಶ್ರೇಣಿ 6000–11200 ಇದ್ದು, ಒಂದೇ ಆಗಿರುತ್ತದೆಂದು ತಿಳಿಸಿರುತ್ತಾರೆ ಹಾಗೂ ಶ್ರೀ ಓಬ ನಾಯ್ಕ ಹಾಗೂ ಇತರರು, ಮನೋವೈದ್ಯಕೀಯ ಸಮಾಜ ಕಾರ್ಯಕರ್ತರು, ಕರ್ನಾಟಕ ಮಾನಸಿಕ ಆರೋಗ್ಯ ಸಂಸ್ಥೆ, ಧಾರವಾಡರವರು ಸಲ್ಲಿಸಿರುವ ಮನವಿಯ ಹಿನ್ನಲೆಯಲ್ಲಿ ಅವರುಗಳು ಹಾಲಿ ಪಡೆಯುತ್ತಿರುವ ವೇತನ ಶ್ರೇಣಿ ರೂ. 4150–7800 ಆಗಿದ್ದು, ಸರ್ಕಾರಿ ಆಸ್ಪತ್ರೆ, ಮಂಡ್ಯದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಮನೋವೈದ್ಯಕೀಯ ಸಮಾಜ ಕಾರ್ಯಕರ್ತರಾದ ಶ್ರೀ ರಾಜಣ್ಣ, ಬಿ.ಎಂ. ರವರಿಗೆ ನೀಡಿರುವ ವೇತನ ಶ್ರೇಣಿ ರೂ. 6000–11200 ರಿಂದಾಗಿ ಅವರುಗಳು ಕಡಿಮೆ ವೇತನ ಶ್ರೇಣಿ ಮತ್ತು ವೇತನ ಪಡೆಯುತ್ತಿರುವುದರಿಂದ ಸದರಿ ವೇತನ ತಾರತಮ್ಯವನ್ನು ಸರಿಪಡಿಸುವ ಬಗ್ಗೆ ಪ್ರಸ್ತಾಪಿಸಿರುತ್ತಾರೆ.

5) ಪ್ರಕರಣವನ್ನು ವಿವರವಾಗಿ ಪರಿಶೀಲಿಸಲಾಗಿ, ಸದರಿ ನೌಕರರಿಗೆ ವೇತನ ಶ್ರೇಣಿಯನ್ನು ಹಂಚಿಕೆ ಮಾಡುವಲ್ಲಿ ಉಂಟಾಗಿರುವ ತಾರತಮ್ಯವನ್ನು ಸರಿಪಡಿಸುವ ದೃಷ್ಟಿಯಿಂದ ಈ ಕೆಳಗಿನಂತೆ ಆದೇಶ ಮಾಡಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 50 ಕೆವಿಎಂ 2006, ಬೆಂಗಳೂರು, ದಿನಾಂಕ: 16ನೇ ಜನವರಿ 2007**

6) ಧಾರವಾಡದ ಕರ್ನಾಟಕ ಮಾನಸಿಕ ಆರೋಗ್ಯ ಸಂಸ್ಥೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಸೈಕಿಯಾಟ್ರಿಕ್ ಸೋಷಿಯಲ್ ವರ್ಕರ್ಸ್ ಮತ್ತು ಕ್ಲಿನಿಕಲ್ ಸೈಕಾಲಜಿಸ್ಟ್‌ಗಳ ಹಾಗೂ ಇತರರ ವೇತನ ಶ್ರೇಣಿಯನ್ನು ಈ ಕೆಳಗಿನಂತೆ ಪರಿಷ್ಕರಿಸಿ ಆದೇಶಿಸಿದೆ.

| ಕ್ರಮ ಸಂಖ್ಯೆ | ಹುದ್ದೆಯ ಹೆಸರು | ಈಗಿರುವ ವೇತನ ಶ್ರೇಣಿ | ಪರಿಷ್ಕರಿಸಲಾಗಿರುವ ವೇತನ ಶ್ರೇಣಿ | ಜಾರಿಗೆ ಬರುವ ದಿನಾಂಕ |
|---|---|---|---|---|
| 1 | ಕ್ಲಿನಿಕಲ್ ಸೈಕಾಲಜಿಸ್ಟ್ಸ್ | 7400–13120 | 6000–11200 | 19–8–2004 |
| 2 | ಸೈಕಿಯಾಟ್ರಿಕ್ ಸೋಷಿಯಲ್ ವರ್ಕರ್ | 4150–7800 | 6000–11200 | 19–8–2004 |
| 3 | ಡಯಟೀಷಿಯನ್ | 4575–8400 | 5200–9580 | 19–8–2004 |
| 4 | ಮೆಡಿಕಲ್ ರೆಕಾರ್ಡ್ ಆಫೀಸರ್ | 6300–11840 | 6000–11200 | 19–8–2004 |
| 5 | ಆಕುಪೇಷನಲ್ ಥೆರಪಿಸ್ಟ್ | 4575–8400 | 3300–6300 | 19–8–2004 |
| 6 | ಡ್ರೈವರ್ಸ್ | 3500–5450 | 3000–5450 | 19–8–2004 |

8) ಈ ಮೇಲಿನಂತೆ ವೇತನ ಶ್ರೇಣಿಯನ್ನು ಪರಿಷ್ಕರಿಸುವುದರಿಂದ ಉಂಟಾಗುವ ಬಾಕಿ ಮೊತ್ತವನ್ನು ಪಾವತಿಸಲು ಮತ್ತು ವಸೂಲಾತಿ ಮಾಡಲು ಸದರಿ ಸಿಬ್ಬಂದಿಗಳು ಕೆಲಸಕ್ಕೆ ಹಾಜರಾದ ದಿನಾಂಕದಿಂದ ನಿಯಮಾನುಸಾರ ಮುಂದಿನ ಕ್ರಮ ವಹಿಸುವುದು.

9) ದಿನಾಂಕ 19–8–2004 ಸಂಖ್ಯೆ ಆಕುಕ 29 ಕೆವಿಎಂ 2004ರ ಸರ್ಕಾರಿ ಆದೇಶವನ್ನು ಮೇಲಿನಷ್ಟಕ್ಕೆ ಮಾತ್ರ ಅನ್ವಯಿಸುವಂತೆ ತಿದ್ದುಪಡಿ ಮಾಡಲಾಗಿದೆ.

10) ಈ ಆದೇಶವನ್ನು ದಿನಾಂಕ 7–10–2006 ಸಂಖ್ಯೆ ಆಕುಕ 1020 ಆಂಆಸ 2006ರ ಅ.ಟಿ.ಯಲ್ಲಿ ಆಂತರಿಕ ಆರ್ಥಿಕ ಸಲಹೆಗಾರರ ಹಾಗೂ ದಿನಾಂಕ 8–1–2007 ಸಂಖ್ಯೆ ಆಇ 1926 ವೆಚ್ಚ–5/2006ರ ಅ.ಟಿ.ಯಲ್ಲಿ ಆರ್ಥಿಕ ಇಲಾಖೆಯ ಸಹಮತಿಯನ್ನು ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1093

**ವಿ. ವೆಂಕಟೇಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ವೈದ್ಯಕೀಯ ಶಿಕ್ಷಣ)

**ಜಲ ಸಂಪನ್ಮೂಲ ಸಚಿವಾಲಯ**

**ವಿಷಯ :** ಜಲ ಸಂಪನ್ಮೂಲ ಇಲಾಖೆಯಲ್ಲಿ ದಿನಗೂಲಿ ಕೆಲಸಕ್ಕೆ ಸೇರುವ ಮೊದಲು ಎಸ್.ಎಸ್.ಎಲ್.ಸಿ. ವಿದ್ಯಾರ್ಹತೆ ಹೊಂದಿದ್ದು ಪಾಟಕಾರಿಗಳಾಗಿ ಕಾರ್ಯನಿರ್ವಹಿಸುತ್ತಿರುವ "ಡಿ" ವರ್ಗದ ಸಿಬ್ಬಂದಿಯನ್ನು ಗ್ರೂಪ್–ಸಿ ವೃಂದಕ್ಕೆ ಬದಲಾವಣೆ ಮಾಡಿರುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂ: ನೀಇ 106 ಸೇಇಸಿ 2001, ದಿ: 30–6–2001.
2. ಸರ್ಕಾರದ ಆದೇಶ ಸಂ: ಜಸಂಇ 270 ಸೇಇಸಿ 2004, ದಿ: 3–2–2006.
3. ಸುತ್ತೋಲೆ ಸಂ: ಸಿಆಸುಇ 7 ಎಸ್‌ಎಲ್‌ಸಿ 92, ದಿ: 27–6–1992.
4. ಕರ್ನಾಟಕ ಆಡಳಿತ ನ್ಯಾಯ ಮಂಡಳಿ ಅರ್ಜಿ ಸಂ: ಹಾಗೂ ಆದೇಶದ ದಿನಾಂಕ ಈ ಕೆಳಕಂಡಂತೆ ಇದೆ.
   - ಎ) 8461 ರಿಂದ 8471/2006, 297 ರಿಂದ 303/2007, 2777 ರಿಂದ 2781/2007, 3098/2007, 4870/12006 ಮತ್ತು 5441 ರಿಂದ 5445/2006, ದಿ: 23–8–2007.
   - ಬಿ) 5126 ರಿಂದ 5132/2006, ದಿ: 18–7–2006.
   - ಸಿ) 4200/2006 ದಿ: 4–4–2007.
   - ಡಿ) 4600 ರಿಂದ 4604/2006 ದಿ: 4–4–2007.
   - ಇ) 3473 ರಿಂದ 3474/2006, ದಿ: 15–3–2007.
   - ಎಫ್) 3468 ರಿಂದ 3469/2006 ದಿ: 22–3–2007.
   - ಜಿ) 3570/2006 ದಿ: 22–3–2007.
   - ಹೆಚ್) 2679 ರಿಂದ 2686/2006 ದಿ: 7–4–2006.
   - ಐ) 3568 ರಿಂದ 3569/2006, ದಿ: 22–3–2007.
   - ಜೆ) 3394 ರಿಂದ 3399/2006, ದಿ: 28–4–2006.
   - ಕೆ) 3590/2006, ದಿ: 4–4–2007.

ಎಲ್) 4682 ರಿಂದ 4683/2006 ದಿ: 4–4–2007.
ಎಂ) 4623/2007 ಮತ್ತು 4659 ರಿಂದ 4663/2007, ದಿ: 28–1–2008.
ಎನ್) 3571/2006, ದಿ: 22–3–2007.
ಒ) 3001 ರಿಂದ 3013/2006 ದಿ: 22–9–2006.
ಪಿ) 3470 ರಿಂದ 3472/2006, ದಿ: 4–4–2007.
ಕ್ಯೂ) 3463/2006, ದಿ: 21–12–2006.

5. ಸಮ ಸಂಖ್ಯೆ ಪತ್ರ ದಿನಾಂಕ 14–11–2007.

**ಪ್ರಸ್ತಾವನೆ :**

ಮೇಲೆ ಓದಲಾದ (1)ರಲ್ಲಿ ಜಲ ಸಂಪನ್ಮೂಲ ಇಲಾಖೆಯಲ್ಲಿ ದಿನಗೂಲಿ ಕೆಲಸಕ್ಕೆ ಸೇರುವ ಮೊದಲೇ ಎಸ್.ಎಸ್.ಎಲ್.ಸಿ. ವಿದ್ಯಾರ್ಹತೆ ಹೊಂದಿ ಸೌಡಿ, ನೀರಗಂಟಿ, ವಾಟರ್ ಬಾಯ್ ಮತ್ತು ಪಾಟಕಾರಿಯಾಗಿ ಕೆಲಸ ನಿರ್ವಹಿಸುತ್ತಿರುವ ಗ್ರೂಪ್ "ಡಿ" ಸಿಬ್ಬಂದಿಯನ್ನು ಕೆಲವೊಂದು ಷರತ್ತಿಗೆ ಒಳಪಟ್ಟು ಗ್ರೂಪ್ 'ಸಿ' ಹುದ್ದೆಗೆ ಸಮಾನಾಂತರಿಸಿ ರೂ. 3000–5450 ವೇತನ ಶ್ರೇಣಿ ನೀಡಲು ಅನುಮೋದನೆ ನೀಡಲಾಗಿತ್ತು. ಮತ್ತು ಆರ್ಥಿಕ ಸೌಲಭ್ಯವನ್ನು ಆದೇಶ ಹೊರಡಿಸಿದ ದಿನಾಂಕದಿಂದ ಅನ್ವಯಿಸುವಂತೆ ಮಂಜೂರು ಮಾಡಲಾಗಿತ್ತು.

ಆದರೆ ಇಂತಹ ಪ್ರಕರಣಗಳಲ್ಲಿ ಸರ್ಕಾರದ ಸುತ್ತೋಲೆ ಸಂ: ಸಿಆಸುಇ 7 ಎಸ್‌ಎಲ್‌ಸಿ 92, ದಿನಾಂಕ 27–6–1992 ರಲ್ಲಿ ನೀಡಿರುವ ಸ್ಪಷ್ಟೀಕರಣದಲ್ಲಿ ದಿನಗೂಲಿ ನೌಕರರು ಮೊಟ್ಟ ಮೊದಲು ನೇಮಕಗೊಂಡ ಹುದ್ದೆಗೆ ಅಥವಾ ತತ್ಸಮಾನ ಹುದ್ದೆಗೆ ಮಾತ್ರ ಅವರ ಸೇವೆಯನ್ನು ಸಕ್ರಮಗೊಳಿಸಲು ಅವಕಾಶವಿರುತ್ತದೆ. ಅವರು ಪಡೆದಿರುವ ವಿದ್ಯಾರ್ಹತೆಗೆ ಅನುಗುಣವಾದ ಹುದ್ದೆಗೆ ಸಕ್ರಮಗೊಳಿಸಲು ಅವಕಾಶವಿಲ್ಲ. ಆದರೆ ಮೇಲೆ ಓದಲಾದ ದಿ: 30–6–2001ರ ಆದೇಶದಲ್ಲಿ ಸೂಚಿಸಿರುವ ಗ್ರೂಪ್ 'ಡಿ' ವರ್ಗದ ಸಿಬ್ಬಂದಿ ದಿನಗೂಲಿಗೆ ಸೇರಿದ ಪೂರ್ವದಲ್ಲಿ ಎಸ್.ಎಸ್.ಎಲ್.ಸಿ. ವಿದ್ಯಾರ್ಹತೆ ಹೊಂದಿದ್ದರು ಎಂಬ ಅಂಶವನ್ನು ಆಧರಿಸಿ, ಗ್ರೂಪ್ ಸಿ ವೃಂದಕ್ಕೆ ಸಮಾನಾಂತರಿಸಿ ರೂ. 3000–5450ರ ವೇತನ ಶ್ರೇಣಿಯನ್ನು ನೀಡಲು ಹೊರಡಿಸಿರುವ ಆದೇಶವು ಸಿಆಸುಇ (ಸೇವಾ ನಿಯಮ) ಹೊರಡಿಸಿರುವ ಆದೇಶ/ನಿಯಮಗಳಿಗೆ ವ್ಯತಿರಿಕ್ತವಾಗಿರುತ್ತದೆ, ಅಲ್ಲದೇ ಈ ಅಂಶವು ಯಾವುದೇ ಒಂದು ಹುದ್ದೆಗೆ ಹೆಚ್ಚಿನ ವೇತನ ಶ್ರೇಣಿಯನ್ನು ನಿಗದಿಪಡಿಸುವಲ್ಲಿ ಅಳವಡಿಸಿಕೊಂಡಿರುವ ಸರ್ಕಾರದ ನೀತಿಯನ್ನು ಉಲ್ಲಂಘಿಸಿದಂತಾಗಿರುತ್ತದೆ.

ಈ ಹಿನ್ನೆಲೆಯಲ್ಲಿ ಸರ್ಕಾರದ ದಿನಾಂಕ 30–6–2001ರ ಆದೇಶವನ್ನು ಹಿಂದಕ್ಕೆ ಪಡೆದು, ಆ ಆದೇಶದನ್ವಯ ಸೌಲಭ್ಯ ಪಡೆದಿರುವ ಸಿಬ್ಬಂದಿಗೆ ನಿಯಮಾನುಸಾರ ಸೂಚನೆ ನೀಡುವ ಮೂಲಕ ಹೆಚ್ಚುವರಿಯಾಗಿ ಪಾವತಿ ಮಾಡಿರುವ ಮೊತ್ತವನ್ನು ಅವರಿಂದ ವಸೂಲು ಮಾಡಲು ಮೇಲೆ ಓದಲಾದ (2)ರಲ್ಲಿ ಆದೇಶಿಸಲಾಗಿತ್ತು. ಎಸ್.ಎಸ್.ಎಲ್.ಸಿ. ವಿದ್ಯಾರ್ಹತೆ ಹೊಂದಿದ್ದರು ಎಂಬ ಒಂದೇ ಕಾರಣಕ್ಕಾಗಿ ಈ ಸಿಬ್ಬಂದಿಗೆ ಮೇಲಿನ ಹುದ್ದೆ ಪಡೆಯಲು ಅರ್ಹತೆ ಇರುವುದಿಲ್ಲ. ಈ ವಿದ್ಯಾರ್ಹತೆ ಹೊಂದಿದ ಸಿಬ್ಬಂದಿ ನೇಮಕಾತಿಗಾಗಿ ಅಧಿಸೂಚನೆ ಹೊರಡಿಸಿದಾಗ ತಕ್ಕನಾದ ಹುದ್ದೆಯ ನೇಮಕಾತಿ ಪ್ರಕ್ರಿಯೆಯಲ್ಲಿ ಭಾಗವಹಿಸಲು ಮಾತ್ರ ಅರ್ಹತೆ ಹೊಂದುತ್ತಾರೆ.

ಆದರೆ ಕ್ಷೇತ್ರೀಯ ಇಲಾಖೆಯ ಸಂಬಂಧಪಟ್ಟ ಅಧಿಕಾರಿಗಳು ನಿಯಮಾನುಸಾರ ಸಂಬಂಧಪಟ್ಟ ಸಿಬ್ಬಂದಿಗೆ ನೋಟೀಸು ನೀಡಿ, ಅವರಿಂದ ವಿವರಣೆ ಪಡೆದು ಅದನ್ನು ಪರಿಶೀಲಿಸಿ ಕಾನೂನಿನ್ವಯ ಆದೇಶವನ್ನು ಹೊರಡಿಸಬೇಕಾಗಿತ್ತು. ಈ ವಿಧಾನವನ್ನು ಪಾಲಿಸದೆ ಆದೇಶ ಹೊರಡಿಸಿರುವುದರಿಂದ, ಬಾಧೆಗೊಳಗಾದ ಅನೇಕ ಸಿಬ್ಬಂದಿ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಕ್ಷೇತ್ರೀಯ ಇಲಾಖಾ ಅಧಿಕಾರಿಗಳು ಹೊರಡಿಸಿರುವ ಆದೇಶ ಮತ್ತು ದಿನಾಂಕ 3–2–2006ರ ಸರ್ಕಾರದ ಆದೇಶದ ವಿರುದ್ಧ ಅರ್ಜಿಗಳನ್ನು ಸಲ್ಲಿಸಿದ್ದರು. ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ಕೆಲವು ಪ್ರಕರಣಗಳಲ್ಲಿ ಅರ್ಜಿದಾರರಿಗೆ ನೋಟೀಸು ನೀಡಿ, ಅವರಿಂದ ವಿವರಣೆಯನ್ನು ಪಡೆದು ನಂತರ ಹೊಸ ಆದೇಶ ಹೊರಡಿಸಿ, ಈ ಸಿಬ್ಬಂದಿಗೆ ದಿನಾಂಕ 30–6–2001ರ ಆದೇಶದನ್ವಯ ನೀಡಿರುವ ಆರ್ಥಿಕ ಸೌಲಭ್ಯಗಳನ್ನು ಕಡಿತಗೊಳಿಸಬೇಕಾಗಿತ್ತೆಂದು ಇದರಿಂದಾಗಿ, ಸ್ವಾಭಾವಿಕ ನ್ಯಾಯವನ್ನು ಒದಗಿಸಿಲ್ಲವೆಂಬ ಕಾರಣಕ್ಕಾಗಿ ಸಂಬಂಧಪಟ್ಟ ಕ್ಷೇತ್ರೀಯ ಅಧಿಕಾರಿಗಳು ಹೊರಡಿಸಿರುವ ಆದೇಶವನ್ನು ವಜಾಗೊಳಿಸಿ, ಅರ್ಜಿದಾರರಿಗೆ ನೋಟೀಸು ನೀಡಿ, ಅವರಿಂದ ವಿವರಣೆಯನ್ನು ಪಡೆದು ಅದನ್ನು ಕಾನೂನಿನ್ವಯ ಪರಿಶೀಲಿಸಿ, ಮರು ಆದೇಶ ಹೊರಡಿಸಲು ಆದೇಶಿಸಿತ್ತು.

ಇನ್ನೂ ಕೆಲವು ಪ್ರಕರಣಗಳಲ್ಲಿ ಆಡಳಿತ ನ್ಯಾಯ ಮಂಡಳಿಯು ಸರ್ಕಾರದ ದಿ: 3–2–2006ರ ಆದೇಶವನ್ನು ವಜಾಗೊಳಿಸಿ, ಕಾನೂನಿನ್ವಯ ಅರ್ಜಿದಾರರಿಗೆ ನೋಟೀಸು ನೀಡಿ, ಅವರಿಂದ ವಿವರಣೆಯನ್ನು ಪಡೆದು ಪರಿಶೀಲನೆಯ ನಂತರ ಹೊಸ ಆದೇಶ ಹೊರಡಿಸಲು ಆದೇಶಿಸಿತ್ತು.

ಮೇಲೆ ಓದಲಾದ ಉಲ್ಲೇಖ 5ರಲ್ಲಿ ಇಂತಹ ಪ್ರಕರಣಗಳಲ್ಲಿ ಸರ್ಕಾರವು ಸಂಬಂಧಪಟ್ಟ ಕ್ಷೇತ್ರೀಯ ಅಧಿಕಾರಿಗಳಿಗೆ ನಿರ್ದೇಶನ ನೀಡಿ, ಸಂಬಂಧಪಟ್ಟ ಸಿಬ್ಬಂದಿಗೆ ನೋಟೀಸು ನೀಡಿ, ಅವರಿಂದ ವಿವರಣೆಯನ್ನು ಪಡೆದು ಸಲ್ಲಿಸಲು

ನಿರ್ದೇಶಿಸಲಾಗಿತ್ತು. ಅದರಂತೆ ಸಂಬಂಧಿಸಿದ ಬಾಧಿತ ನೌಕರರಿಗೆ ದಿನಾಂಕ 27–12–2007ರಂದು ಕ್ಷೇತ್ರೀಯ ಇಲಾಖೆಯ ಅಧಿಕಾರಿಗಳು ನೋಟೀಸ್ ನೀಡಿ 15 ದಿನಗಳೊಳಗಾಗಿ ವಿವರಣೆ ನೀಡುವಂತೆ ತಿಳಿಸಿದ್ದು ಸದರಿ ನೋಟೀಸಿನಂತೆ ಬಾಧಿತರಾದವರು ತಮ್ಮ ಲಿಖಿತ ಹೇಳಿಕೆಯನ್ನು ಸಲ್ಲಿಸಿರುತ್ತಾರೆ. ನೋಟೀಸಿಗೆ ಅರ್ಜಿದಾರರು ನೀಡಿರುವ ಹೇಳಕೆಗಳನ್ನು ನಿಯಮಾನುಸಾರ ಹಾಗೂ ಸರ್ಕಾರದ ಪ್ರಸ್ತುತ ನೀತಿಗಳನ್ವಯ ಪರಿಶೀಲಿಸಲಾಗಿದೆ.

ಮೇಲೆ ನೀಡಿರುವ ವಿವರಗಳ ಹಿನ್ನೆಲೆಯಲ್ಲಿ ವಿಷಯವನ್ನು ಕಾನೂನಿನ್ವಯ ಕೂಲಂಕಷವಾಗಿ ಮರು ಪರಿಶೀಲಿಸಿ ಈ ಕೆಳಗಿನಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಜಸಂಇ 62 ಪಿಡಬ್ಲ್ಯೂಸಿ 2007, ಬೆಂಗಳೂರು, ದಿನಾಂಕ: 18ನೇ ಜುಲೈ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ವಿಷಯವನ್ನು ಮರು ಪರಿಶೀಲಿಸಲಾಗಿ, ದಿನಗೂಲಿಗೆ ಸೇರುವ ಮೊದಲು ಎಸ್.ಎಸ್.ಎಲ್.ಸಿ. ವಿದ್ಯಾರ್ಹತೆ ಹೊಂದಿದ್ದ ನೌಕರರನ್ನು ಗ್ರೂಪ್ ಸಿ ವೃಂದಕ್ಕೆ ಬದಲಾವಣೆ ಮಾಡುವ ಪ್ರಸ್ತಾವನೆ ಸರ್ಕಾರದ ಸುತ್ತೋಲೆ ಸಂ: ಸಿಆಸುಇ 7 ಎಸ್‌ಎಲ್‌ಸಿ 92 ದಿನಾಂಕ 27–6–1992ರಲ್ಲಿ ನೀಡಿರುವ ಸೂಚನೆಗಳಿಗೆ ವಿರುದ್ಧವಾಗಿದೆ. ಅದರನ್ವಯ ದಿನಗೂಲಿ ನೌಕರರು ಮೊಟ್ಟ ಮೊದಲು ನೇಮಕಗೊಂಡ ಹುದ್ದೆಗೆ ಅಥವಾ ತತ್ಸಮಾನ ಹುದ್ದೆಗೆ ಮಾತ್ರ ಅವರ ಸೇವೆಯನ್ನು ಸಕ್ರಮಗೊಳಿಸಲು ಅವಕಾಶವಿರುತ್ತದೆ. ಎಸ್.ಎಸ್.ಎಲ್.ಸಿ. ವಿದ್ಯಾರ್ಹತೆ ಹೊಂದಿದ್ದರು ಎಂಬ ಒಂದೇ ಕಾರಣಕ್ಕಾಗಿ ಈ ಸಿಬ್ಬಂದಿಗೆ ಮೇಲಿನ ಹುದ್ದೆ ಪಡೆಯಲು ಅರ್ಹತೆ ಇರುವುದಿಲ್ಲ. ಈ ವಿದ್ಯಾರ್ಹತೆ ಹೊಂದಿದ ಸಿಬ್ಬಂದಿ ನೇಮಕಾತಿಗಾಗಿ ಅಧಿಸೂಚನೆ ಹೊರಡಿಸಿದಾಗ ತಕ್ಕನಾದ ಹುದ್ದೆಯ ನೇಮಕಾತಿ ಪ್ರಕ್ರಿಯೆಯಲ್ಲಿ ಭಾಗವಹಿಸಲು ಮಾತ್ರ ಅರ್ಹತೆ ಹೊಂದುತ್ತಾರೆ. ಈ ಸಿಬ್ಬಂದಿಯು ನಿಯಮಾನುಸಾರ ಸಕ್ರಮ ಸ್ಪರ್ಧಾತ್ಮಕ ನೇಮಕಾತಿ ಪ್ರಕ್ರಿಯೆಯಲ್ಲಿ ಭಾಗವಹಿಸಿ ನೇಮಕ ಹೊಂದಿರುವ ಸಿಬ್ಬಂದಿಯಲ್ಲ.

ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಉಲ್ಲೇಖ (4)ರಲ್ಲಿನ ಅರ್ಜಿಗಳಲ್ಲಿ ನೀಡಿರುವ ತೀರ್ಪಿನಂತೆ ಕ್ಷೇತ್ರೀಯ ಅಧಿಕಾರಿಗಳು ಸಂಬಂಧಿಸಿದ ಅರ್ಜಿದಾರರಿಗೆ ನೋಟೀಸು ನೀಡಿ ಅವರಿಂದ ವಿವರಣೆಯನ್ನು ಪಡೆದಿರುತ್ತಾರೆ. ಉಲ್ಲೇಖ (5)ರ ಪತ್ರದಲ್ಲಿ ಅರ್ಜಿದಾರರು ನೀಡಿರುವ ಹೇಳಿಕೆಗಳನ್ನು ನಿಯಮಾನುಸಾರ ಹಾಗೂ ಪ್ರಸ್ತುತ ನೀತಿಗಳನ್ವಯ ವಿವರವಾಗಿ ಪರಿಶೀಲಿಸಲಾಗಿದೆ.

ಆದುದರಿಂದ ಸರ್ಕಾರದ ಆದೇಶ ಸಂ: ನೀಇ 106 ಸೇಇಸಿ 2001 ದಿನಾಂಕ 30–6–2001ರಂತೆ ಗ್ರೂಪ್ ಡಿ ವರ್ಗದ ಸಿಬ್ಬಂದಿಯು ದಿನಗೂಲಿ ಸೇವೆಗೆ ಸೇರುವ ಪೂರ್ವದಲ್ಲಿ ಎಸ್.ಎಸ್.ಎಲ್.ಸಿ. ವಿದ್ಯಾರ್ಹತೆ ಹೊಂದಿದ್ದರು ಎಂಬ ಅಂಶವನ್ನು ಆಧರಿಸಿ, ಗ್ರೂಪ್ ಸಿ ವೃಂದಕ್ಕೆ ಸಮಾನಾಂತರಿಸಿ, ರೂ. 3000–5450 ವೇತನ ಶ್ರೇಣಿಯನ್ನು ಮಂಜೂರು ಮಾಡಿ ಹೊರಡಿಸಿರುವ ಆದೇಶವು ಸರ್ಕಾರವು ಕಾಲಕಾಲಕ್ಕೆ ಹೊರಡಿಸಿರುವ ಆದೇಶ/ನಿಯಮಗಳಿಗೆ ವ್ಯತಿರಿಕ್ತವಾಗಿರುತ್ತದೆ. ಮಾತ್ರವಲ್ಲ ಈ ಕ್ರಮವು ಯಾವುದೆ ಒಂದು ಹುದ್ದೆಗೆ ಹೆಚ್ಚಿನ ವೇತನ ಶ್ರೇಣಿಯನ್ನು ನಿಗದಿಪಡಿಸುವಲ್ಲಿ ಅಳವಡಿಸಿಕೊಂಡಿರುವ ಸರ್ಕಾರದ ನೀತಿಯನ್ನು ಉಲ್ಲಂಘಿಸಿದಂತಾಗುತ್ತದೆ. ಆದುದರಿಂದ ಸರ್ಕಾರದ ಆದೇಶ ಸಂ: ನೀಇ 106 ಸೇಇಸಿ 2001 ದಿನಾಂಕ 30–6–2001ರ ಆದೇಶವನ್ನು ರದ್ದುಪಡಿಸಿ, ಸದರಿ ಆದೇಶದನ್ವಯ ನೀಡಿರುವ ಆರ್ಥಿಕ ಸೌಲಭ್ಯವನ್ನು ಸಮ ಕಂತುಗಳಲ್ಲಿ ಕಡಿತಗೊಳಿಸಲು ಹಾಗೂ ಗ್ರೂಪ್ ಡಿ ವೃಂದದಲ್ಲಿ ವೇತನವನ್ನು ಕಾಲಕಾಲಕ್ಕೆ ಕ್ರಮಬದ್ಧಗೊಳಿಸಲು ಈ ಮೂಲಕ ಆದೇಶಿಸಲಾಗಿದೆ.

ಈ ಆದೇಶವನ್ನು ಸಿಆಸುಇ (ಸೇ.ನಿ) 122 ಸೇನಿಸಿ 2008, ದಿನಾಂಕ 16–5–2008 ಮತ್ತು ಆರ್ಥಿಕ ಇಲಾಖೆಯ ಆಇ 103 ಸೇ 3, 2008, ದಿನಾಂಕ 6–6–2008ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1087

**ಎಸ್.ಬಿ. ರುದ್ರಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ (ಸೇವೆಗಳು–ಬಿ)

**ಶಿಕ್ಷಣ ಸಚಿವಾಲಯ**

**ಸಂಖ್ಯೆ ಇಡಿ 62 ಪಿಎಂಸಿ 2007, ಬೆಂಗಳೂರು, ದಿನಾಂಕ 14ನೇ ಜುಲೈ 2008**

**ಸುತ್ತೋಲೆ**

**ವಿಷಯ :** ಶೈಕ್ಷಣಿಕ ವರ್ಷದ ಮಧ್ಯಾಂತರದಲ್ಲಿ ವಯೋ ನಿವೃತ್ತಿ ಹೊಂದುವ ಖಾಸಗಿ ಅನುದಾನಿತ ಪ್ರಾಥಮಿಕ ಮತ್ತು ಪ್ರೌಢ ಶಾಲಾ ಸಹ ಶಿಕ್ಷಕರನ್ನು ಶೈಕ್ಷಣಿಕ ವರ್ಷಾಂತ್ಯದವರೆಗೆ ಒಪ್ಪಂದದ ಆಧಾರದ ಮೇಲೆ ಪುನರ್ ನೇಮಕ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ. ಡಿಪಿಎಆರ್ 2 ಎಸ್‌ಡಿಇ 90, ದಿ: 22–2–1990.
2. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರ ದಿ: 29–7–2006ರ ಸುತ್ತೋಲೆ ಸಂಖ್ಯೆ ಸಿ4(6), ಪ್ರೌ.ಶಾ.ಶಿ.ಪು.ನೇ. 46/2006–07.

ಉಲ್ಲೇಖ (1)ರ ಅಧಿಕೃತ ಜ್ಞಾಪನದಲ್ಲಿ, ಸರ್ಕಾರದ ವಿವಿಧ ಶಿಕ್ಷಣ ಸಂಸ್ಥೆಗಳಲ್ಲಿ ಕೆಲಸ ಮಾಡುತ್ತಿರುವ ಬೋಧಕ ಸಿಬ್ಬಂದಿಗಳಾದ ಸಹ ಶಿಕ್ಷಕರು, ಉಪನ್ಯಾಸಕರು ಹಾಗೂ ಪ್ರೋಫೆಸರ್‌ಗಳು ಶೈಕ್ಷಣಿಕ ವರ್ಷದ ಮಧ್ಯಾವಧಿಯಲ್ಲಿ ನಿವೃತ್ತಿ ಹೊಂದುತ್ತಿದ್ದರೆ, ಅಂತಹ ಬೋಧಕ ಸಿಬ್ಬಂದಿಯನ್ನು ಸಂಬಂಧಪಟ್ಟ ಅಧಿಕಾರಿಯ ಅನುಮತಿ ಪಡೆದು ಶೈಕ್ಷಣಿಕ ವರ್ಷದ ಕೊನೆಯ ತನಕ ವಿದ್ಯಾರ್ಥಿಗಳ ಶೈಕ್ಷಣಿಕ ಹಿತದೃಷ್ಟಿಯಿಂದ, ಸೇವೆಯಲ್ಲಿ ಮುಂದುವರೆಸಲು ಹಿಂದೆ ಇದ್ದಂತಹ ಆಜ್ಞೆಯನ್ನು ಮುಂದುವರೆಸಲಾಗಿದೆ. ಆ ಕಾರ್ಯ ನೀತಿಯು, ಅನುದಾನಿತ ಹಾಗೂ ಇತರೆ ಸಂಸ್ಥೆಗಳಿಗೂ ಅನ್ವಯವಾಗುತ್ತದೆಯೆಂದು ದಿ: 23–12–1994ರ ಅಧಿಕೃತ ಜ್ಞಾಪನಾ ಸಂಖ್ಯೆ ಆಸುಇ 15 ಎಸ್‌ಡಿಇ 94ರನ್ವಯ ಸೂಚಿಸಲಾಗಿದೆ.

2. ಉಲ್ಲೇಖ (2)ರ ದಿ: 29–7–2006ರ ಸುತ್ತೋಲೆಯಲ್ಲಿ ವಿಧಿಸಿರುವ ಷರತ್ತುಗಳಿಗೊಳಪಟ್ಟು ಶೈಕ್ಷಣಿಕ ವರ್ಷದ ಮಧ್ಯಾಂತರದಲ್ಲಿ ವಯೋ ನಿವೃತ್ತಿ ಹೊಂದುವ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢಶಾಲಾ ಸಹ ಶಿಕ್ಷಕರನ್ನು ಶೈಕ್ಷಣಿಕ ವರ್ಷಾಂತ್ಯದವರೆಗೆ ಅಥವಾ ಆ ಹುದ್ದೆ ಭರ್ತಿಯಾಗುವವರೆಗೆ, ಇದರಲ್ಲಿ ಯಾವುದು ಮೊದಲೋ, ಅಲ್ಲಿಯವರೆಗೆ ವಿದ್ಯಾರ್ಥಿಗಳ ಶೈಕ್ಷಣಿಕ ಹಿತದೃಷ್ಟಿಯಿಂದ ಸೇವೆಯಲ್ಲಿ ಮುಂದುವರೆಸಲು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರು ಉಪ ನಿರ್ದೇಶಕರು/ಕ್ಷೇತ್ರ ಶಿಕ್ಷಣಾಧಿಕಾರಿಗಳಿಗೆ ಅನುಮತಿ ನೀಡಿರುತ್ತಾರೆ.

3. ಅನುದಾನಿತ ಖಾಸಗಿ ಪ್ರಾಥಮಿಕ ಮತ್ತು ಪ್ರೌಢ ಶಾಲಾ ಮಕ್ಕಳ ಶೈಕ್ಷಣಿಕ ಹಿತದೃಷ್ಟಿಯಿಂದ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢಶಾಲೆಗಳ ಮಕ್ಕಳಿಗೆ ನೀಡಿರುವ ಸೌಲಭ್ಯವನ್ನು ಖಾಸಗಿ ಅನುದಾನಿತ ಪ್ರಾಥಮಿಕ ಮತ್ತು ಪ್ರೌಢ ಶಾಲಾ ಮಕ್ಕಳಿಗೂ ಸಹ ವಿಸ್ತರಿಸಲು ತೀರ್ಮಾನಿಸಿದೆ.

4. ಅಂತೆಯೇ ಶೈಕ್ಷಣಿಕ ವರ್ಷದ ಮಧ್ಯದಲ್ಲಿ ವಯೋನಿವೃತ್ತಿ ಹೊಂದಲಿರುವ ಅನುದಾನಿತ ಖಾಸಗಿ ಪ್ರಾಥಮಿಕ ಹಾಗೂ ಪ್ರೌಢ ಶಾಲಾ ಸಹ ಶಿಕ್ಷಕರುಗಳನ್ನು ಶೈಕ್ಷಣಿಕ ವರ್ಷಾಂತ್ಯದವರೆಗೆ ಅಥವಾ ಆ ಹುದ್ದೆ ಭರ್ತಿಯಾಗುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ವಿದ್ಯಾಥಿಗಳ ಶೈಕ್ಷಣಿಕ ಹಿತದೃಷ್ಟಿಯಿಂದ ಒಪ್ಪಂದದ ಆಧಾರದ ಮೇಲೆ ಪುನರ್ ನೇಮಕ ಮಾಡಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಸರ್ಕಾರ ನಿರ್ದೇಶನ ನೀಡಿದೆ:

1. ವಯೋನಿವೃತ್ತಿ ಹೊಂದುವ ಶಿಕ್ಷಕರ ಸೇವೆಯು ಸದರಿ ಶಾಲೆಯಲ್ಲಿ ಮಕ್ಕಳ ಶಿಕ್ಷಕರ ಅನುಪಾತದ ಪ್ರಕಾರ ಮತ್ತು ಶೈಕ್ಷಣಿಕ ಹಿತದೃಷ್ಟಿಯಿಂದ ಅಗತ್ಯತೆ ಇದ್ದಲ್ಲಿ ಮಾತ್ರ ಸಂಬಂಧಿಸಿದ ಆಡಳಿತ ಮಂಡಳಿ ಒಪ್ಪಂದದ ಆಧಾರದ ಮೇಲೆ ಪುನರ್ ನೇಮಕಾತಿ ಮಾಡಬಹುದು.
2. ಸ್ವ ಇಚ್ಚೆಯಿಂದ ಹಾಗೂ ತಮ್ಮ ಸ್ವಂತ ಜವಾಬ್ದಾರಿ ಮೇರೆಗೆ ಸೇವೆಯಲ್ಲಿ ಒಪ್ಪಂದದ ಆಧಾರದ ಮೇಲೆ ಸೇವೆ ಸಲ್ಲಿಸಲು ಶಿಕ್ಷಕರಿಂದ ಮುಚ್ಚಳಿಕೆ ಪಡೆಯತಕ್ಕದ್ದು.
3. ಶಿಕ್ಷಕರು ಸಕ್ಷಮ ವೈದ್ಯಕೀಯ ಪ್ರಾಧಿಕಾರದಿಂದ ಶಿಕ್ಷಕರ ಆರೋಗ್ಯದ ದೃಢತೆ ಬಗ್ಗೆ ವೈದ್ಯಕೀಯ ಪ್ರಮಾಣ ಪತ್ರ ಪಡೆದು ಸಲ್ಲಿಸತಕ್ಕದ್ದು.
4. ಈ ರೀತಿ ವಯೋನಿವೃತ್ತಿಯ ನಂತರ ಒಪ್ಪಂದದ ಆಧಾರದ ಮೇಲೆ ಪುನಃ ನೇಮಕವಾದ ಪ್ರಕರಣಗಳಲ್ಲಿ ಆ ನೇಮಕಾತಿಯನ್ನು ಅನುಮೋದಿಸುವ ಅಧಿಕಾರ ಸಾರ್ವಜನಿಕ ಶಿಕ್ಷಣ ಇಲಾಖೆಯ ಜಿಲ್ಲಾ ಉಪನಿರ್ದೇಶಕರಿಗೆ ಈ ಮೂಲಕ ನೀಡಿದೆ.
5. ಮೇಲಿನ ಅಂಶ (4)ರಂತೆ ಅನುಮೋದಿಸಿದ ಕೂಡಲೇ ಈ ಶಿಕ್ಷಕರ ವೇತನವನ್ನು ಕೆ.ಸಿ.ಎಸ್.ಆರ್., ನಿಯಮ 313–ಬಿರ ತತ್ವ ಅನುಸರಿಸಿ ವರ್ಷದ ಅಂತ್ಯದಲ್ಲಿ (ಮಾರ್ಚಿ 31) ನಿಗಧಿಗೊಳಿಸಿ, ಯಾವುದೇ ಕಾರಣಕ್ಕೂ ವಿಳಂಬ ಮಾಡದೆ ಸಹಾಯಾನುದಾನವನ್ನು ವಿತರಿಸತಕ್ಕದ್ದು.
6. ಈ ರೀತಿ ಶಿಕ್ಷಕರನ್ನು ಪುನರ್ ನೇಮಕಾತಿ ನೀಡಿದ ಆದೇಶ ಪ್ರತಿ ಮತ್ತು ಶಿಕ್ಷಕರು ಕರ್ತವ್ಯ ನಿರ್ವಹಿಸಿದ ಅವಧಿಗೆ ಶಾಲಾ ಮುಖ್ಯಸ್ಥರಿಂದ ಸೇವಾ ಪ್ರಮಾನ ಪತ್ರಗಳನ್ನು ಆಯಾಯಾ ಆಡಳಿತ ಮಂಡಳಿ ಲಗತ್ತಿಸತಕ್ಕದ್ದು.
7. ಮಾರ್ಚ್, ಏಪ್ರಿಲ್ ಮತ್ತು ಮೇ ತಿಂಗಳ ಅಂತ್ಯದಲ್ಲಿ ನಿವೃತ್ತಿಯಾಗಲಿರುವ ಪ್ರಾಥಮಿಕ ಮತ್ತು ಪ್ರೌಢ ಶಾಲಾ ಶಿಕ್ಷಕರಿಗೆ ಈ ರೀತಿ ಪುನರ್ ನೇಮಕಾತಿಗೆ ಅವಕಾಶವಿರುವುದಿಲ್ಲ.
8. ನಿವೃತ್ತಿಯ ನಂತರದ ಸೇವೆಯನ್ನು ಯಾವುದೇ ಬೇರೆ ಸೇವಾ ಸೌಲಭ್ಯಗಳಿಗೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲಾಗುವುದಿಲ್ಲ.

5. ಶಿಕ್ಷಣ ಇಲಾಖೆಗೆ ಸಂಬಂಧಿಸಿದ ಆಯುಕ್ತರುಗಳು ಈ ಕುರಿತು ಮುಂದಿನ ಕ್ರಮ ಜರುಗಿಸಲು ಈ ಮೂಲಕ ತಿಳಿಸಲಾಗಿದೆ.

**ಎಸ್.ಹೆಚ್. ಕುರಿಯವರ್**

ಪಿ.ಆರ್. 1085

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ

**FOREST, ECOLOGY AND ENVIRONMENT SECRETARIAT**
**No. FEE 72 FFM 2007, Bangalore, Dated 19th July 2008.**
**CORRIGENDUM**

In para No. 5 of the preamble and in the order portion of Government Order No. FEE 3 FFM 95, dated 8-10-2007, the words for a period of 10 (ten) years with effect from 14-3-2002 shall be read as "for a period of 10 (ten) years with effect from 14-3-2000".

By order and in the name of the Governor of Karnataka,

PR. 1179

**P.R. KALAVATHI**
Under Secretary to Government,
Forest, Ecology and Environment Department.

**ಒಳಾಡಳಿತ ಸಚಿವಾಲಯ**

**ವಿಷಯ :** ಪೊಲೀಸ್ ಇಲಾಖೆಯಲ್ಲಿನ ಅಪತ್ರಾಂಕಿತ ಪೊಲೀಸ್ ಅಧಿಕಾರಿಗಳು 'ರಹದಾರಿ ಪತ್ರ' ಪಡೆಯಲು 'ನಿರಾಕ್ಷೇಪಣಾ ಪತ್ರ' ನೀಡುವ ಅಧಿಕಾರ ಪ್ರತ್ಯಾಯೋಜನೆ ಕುರಿತು – ಆದೇಶ.

**ಓದಲಾಗಿದೆ:** 1. ಅಧಿಕೃತ ಜ್ಞಾಪನ ಸಂಖ್ಯೆ: ಡಿಪಿಎಆರ್ 108 ಕೆಎಂಎಂ 83 ದಿನಾಂಕ 8–7–83.
2. ಡಿಜಿ ಮತ್ತು ಐಜಿಪಿ, ಬೆಂಗಳೂರು ರವರ ಕಛೇರಿಯ ಪತ್ರ ಸಂಖ್ಯೆ: ಸಿಬ್ಬಂದಿ2/16/2007–08, ದಿನಾಂಕ 18–3–2008.

**ಪ್ರಸ್ತಾವನೆ :**

ಸರ್ಕಾರಿ ನೌಕರರು ರಹದಾರಿ ಪತ್ರ ಪಡೆಯಲು ಇಚ್ಛಿಸಿದ್ದಲ್ಲಿ 'ನಿರಾಕ್ಷೇಪಣಾ ಪತ್ರ'ವನ್ನು ಸಲ್ಲಿಸಬೇಕಾಗಿದ್ದು ಅಂತಹ ನಿರಾಕ್ಷೇಪಣಾ ಪತ್ರವನ್ನು ನೀಡಲು ಇಲಾಖಾ ಮುಖ್ಯಸ್ಥರು ಸಕ್ಷಮ ಪ್ರಾಧಿಕಾರವೆಂದು ಓದಲಾದ (1)ರ ಅಧಿಕೃತ ಜ್ಞಾಪನದಲ್ಲಿ ತಿಳಿಸಲಾಗಿದೆ. ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 8(21) ಪರಿಶಿಷ್ಟ–1ರ ಪ್ರಕಾರ ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಬೆಂಗಳೂರು ಇವರು ಪೊಲೀಸ್ ಇಲಾಖೆಯ ಮುಖ್ಯಸ್ಥರೆಂದು ತಿಳಿಸಿದ್ದು, ಪೊಲೀಸ್ ಇಲಾಖೆಯಲ್ಲಿ ಸುಮಾರು 70,000ಕ್ಕೂ ಹೆಚ್ಚು ಪೊಲೀಸ್ ಸಿಬ್ಬಂದಿಗಳಿದ್ದು, ಇಲಾಖಾ ಮುಖ್ಯಸ್ಥರೇ "ನಿರಾಕ್ಷೇಪಣಾ ಪತ್ರ" ನೀಡಲು ಸಾಧ್ಯವಾಗುವುದಿಲ್ಲವೆಂದು ತಿಳಿಸಿ, ಅಪತ್ರಾಂಕಿತ ಪೊಲೀಸ್ ಸಿಬ್ಬಂದಿಗಳಿಗೆ, ಸಂಬಂಧಪಟ್ಟ ನೇಮಕಾತಿ ಪ್ರಾಧಿಕಾರ ಅಥವಾ ಇಲಾಖೆಯ ಡಿ.ಐ.ಜಿ.ಪಿ./ಐ.ಜಿ.ಪಿ./ಎ.ಡಿ.ಜಿ.ಪಿ. ಇವರುಗಳಿಗೆ "ನಿರಾಕ್ಷೇಪಣಾ ಪತ್ರ" ನೀಡುವ ಅಧಿಕಾರವನ್ನು ಪ್ರತ್ಯಾಯೋಜನೆ ಮಾಡುವ ಬಗ್ಗೆ ಓದಲಾದ (2)ರ ಪತ್ರದಲ್ಲಿ ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಬೆಂಗಳೂರು ಇವರು ಸರ್ಕಾರವನ್ನು ಕೋರಿದ್ದಾರೆ.

ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 126 ಪೊಸಿಪ 2008, ಬೆಂಗಳೂರು, ದಿನಾಂಕ: 16ನೇ ಜುಲೈ 2008.**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ ಪೊಲೀಸ್ ಇಲಾಖೆಯಲ್ಲಿನ ಅಪತ್ರಾಂಕಿತ ಪೊಲೀಸ್ ಅಧಿಕಾರಿಗಳಿಗೆ (Non-Gazetted Officer) ರಹದಾರಿ ಪತ್ರವನ್ನು ಪಡೆಯಲು ಸಲ್ಲಿಸಬೇಕಾದ "ನಿರಾಕ್ಷೇಪಣಾ ಪತ್ರ"ವನ್ನು ನೀಡುವ ಅಧಿಕಾರವನ್ನು ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಬೆಂಗಳೂರು ಇವರೊಂದಿಗೆ ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು, ಪೊಲೀಸ್ ಮಹಾ ನಿರೀಕ್ಷಕರು ಹಾಗೂ ಉಪ ಪೊಲೀಸ್ ಮಹಾ ನಿರೀಕ್ಷಕರುಗಳಿಗೆ ಸರ್ಕಾರದ ಅಧಿಕೃತ ಜ್ಞಾಪನ ಮತ್ತು ಕಾಲಕಾಲಕ್ಕೆ ಹೊರಡಿಸುವ ಮಾರ್ಗಸೂಚಿಗಳನ್ನು ಪಾಲಿಸುವ ಷರತ್ತಿಗೊಳಪಟ್ಟು ಅಧಿಕಾರ ಪ್ರತ್ಯಾಯೋಜಿಸಿ ಆದೇಶಿಸಲಾಗಿದೆ.

ಈ ಆದೇಶವನ್ನು ಸಿ.ಆ.ಸು.ಇ. (ಆಡಳಿತ ಸುಧಾರಣೆ–ತರಬೇತಿ)ಯ ಟಿಪ್ಪಣಿ ಸಂಖ್ಯೆ: ಸಿಆಸುಇ 30 ಎಎಆರ್ 2008, ದಿನಾಂಕ 23–6–2008ರಲ್ಲಿ ನೀಡಲಾದ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1081

**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಶಿಕ್ಷಣ ಸಚಿವಾಲಯ

**ವಿಷಯ :** ಶ್ರೀ ಹೆಚ್.ಆರ್. ಕೃಷ್ಣಮೂರ್ತಿ, ಉಪನ್ಯಾಸಕರು, ಡಯಟ್, ಶಿವಮೊಗ್ಗ, ಇವರಿಗೆ ನೀಡಿರುವ ಸ್ಥಾನಪನ್ನ ಬಡ್ತಿಯನ್ನು ಮುಂದೂಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ಸಂಖ್ಯೆ: ಇಡಿ 504 ಡಿಪಿಐ 2007, ದಿನಾಂಕ 11–12–2007.

2. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿ1(1)ನಿ.32–ಸ್ವ.ಪ್ರ.47/2007–08, ದಿನಾಂಕ 7–1–2008.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಆದೇಶದಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಯ ಮುಖ್ಯ ಶಿಕ್ಷಕರು ಹಾಗೂ ತತ್ಸಮಾನ ವೃಂದದ ಅಧಿಕಾರಿಗಳಿಗೆ ಶಿಕ್ಷಣಾಧಿಕಾರಿ ಹಾಗೂ ತತ್ಸಮಾನ ವೃಂದದ ಹುದ್ದೆಗೆ ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ–32 ರನ್ವಯ ಸ್ವತಂತ್ರ ಪ್ರಭಾರದಲ್ಲಿರಿಸಿ ಆದೇಶ ಹೊರಡಿಸಲಾಗಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರು, ಸದರಿ ಅಧಿಸೂಚನೆಯಲ್ಲಿನ ಕ್ರಮ ಸಂಖ್ಯೆ 41 ರಲ್ಲಿರುವ ಶ್ರೀ ಹೆಚ್.ಆರ್. ಕೃಷ್ಣಮೂರ್ತಿ, ಉಪನ್ಯಾಸಕರು, ಡಯಟ್, ಶಿವಮೊಗ್ಗ ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ–32 ರಡಿಯಲ್ಲಿ ಸ್ವತಂತ್ರ ಪ್ರಭಾರದಲ್ಲಿರಿಸಿ, ಶಿಕ್ಷಣಾಧಿಕಾರಿ, ಅಕ್ಷರ ದಾಸೋಹ, ಜಿಲ್ಲಾ ಪಂಚಾಯತ್, ಗುಲ್ಬರ್ಗಾ, ಇಲ್ಲಿಗೆ ಸ್ಥಳ ನಿಯುಕ್ತಿಗೊಳಿಸಿರುವುದನ್ನು ರದ್ದುಪಡಿಸಿ, ಮುಂದಿನ ವ್ಯಾಸಂಗ (ಎಂ.ಇಡಿ) ಮುಂದುವರೆಸಲು ಅನುಮತಿ ನೀಡುವಂತೆ ಕೋರಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 37 ಡಿಪಿಐ 2008, ಬೆಂಗಳೂರು, ದಿನಾಂಕ: 18ನೇ ಜುಲೈ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಸಾರ್ವಜನಿಕ ಶಿಕ್ಷಣ ಇಲಾಖೆಯ, ಮುಖ್ಯ ಶಿಕ್ಷಕರು ಹಾಗೂ ತತ್ಸಮಾನ ವೃಂದದ ಅಧಿಕಾರಿಯಾದ ಶ್ರೀ ಹೆಚ್.ಆರ್. ಕೃಷ್ಣಮೂರ್ತಿ, ಉಪನ್ಯಾಸಕರು, ಡಯಟ್, ಶಿವಮೊಗ್ಗ, ಇವರಿಗೆ ಶಿಕ್ಷಣಾಧಿಕಾರಿ ಹಾಗೂ ತತ್ಸಮಾನ ವೃಂದದ ಹುದ್ದೆಗೆ ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ–32ರನ್ವಯ ಸ್ವತಂತ್ರ ಪ್ರಭಾರದಲ್ಲಿರಿಸಿ, ಶಿಕ್ಷಣಾಧಿಕಾರಿ, ಅಕ್ಷರ ದಾಸೋಹ, ಜಿಲ್ಲಾ ಪಂಚಾಯತ್, ಗುಲ್ಬರ್ಗಾ, ಇಲ್ಲಿಗೆ ಸ್ಥಳ ನಿಯುಕ್ತಿಗೊಳಿಸಿರುವುದನ್ನು ಎಂ.ಇಡಿ. ವ್ಯಾಸಂಗ ಪೂರ್ಣಗೊಳ್ಳುವವರೆಗೆ ಸದರಿಯವರ ನಿಯೋಜನಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ–61 ಮತ್ತು ಉಪಬಂಧ–2ರ ಪ್ರಕಾರ ಮುಂದುವರೆಸಿದೆ. ಹಾಗೂ ನಿಯೋಜನೆಯ ಅವಧಿ ಮುಗಿದ ನಂತರ ಬಡ್ತಿ ನೀಡಿ ಸ್ಥಳ ನಿಯುಕ್ತಿಗೊಳಿಸಿರುವ ಸ್ಥಳದಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳುವ ಷರತ್ತಿಗೊಳಪಟ್ಟು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1082

**ಎಂ.ಎಂ. ಹಿರೇಮಠ**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ಸೇವೆಗಳು–1,2)

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ :** ಅಥಣಿ ತಾಲ್ಲೂಕಿನ ಪಾಂಡೇಗಾಂವ ಗ್ರಾಮಕ್ಕೆ ಮಂಜೂರಾದ ಪಶುಚಿಕಿತ್ಸಾಲಯವನ್ನು ನಾಗನೂರ ಪಿ.ಕೆ. ಗ್ರಾಮಕ್ಕೆ ಸ್ಥಳಾಂತರಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 217 ಪಸಸೇ 2007, ದಿನಾಂಕ 31–8–2007.

2. ಉಪನಿರ್ದೇಶಕರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಳಗಾಂ, ಇವರು ಆಯುಕ್ತರಿಗೆ ಸಲ್ಲಿಸಿದ ಪ್ರಸ್ತಾವನೆ ದಿನಾಂಕ 9–6–2008.

3. ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು, ಇವರ ಪತ್ರ ಸಂಖ್ಯೆ: ಆಪಸಂ/ಡಿವಿಡಿ–3/ವಿವ–13/ಭಾಗ–2/06–07, ದಿನಾಂಕ 21–6–2008.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರಿ ಆದೇಶದಲ್ಲಿ ಬೆಳಗಾವಿ ಜಿಲ್ಲೆ ಅಥಣಿ ತಾಲ್ಲೂಕಿನ ಪಾಂಡೇಗಾಂವ್ ಗ್ರಾಮಕ್ಕೆ ಪಶುಚಿಕಿತ್ಸಾಲಯವನ್ನು ಮಂಜೂರು ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರನ್ವಯ ಉಪನಿರ್ದೇಶಕರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಳಗಾಂ, ಇವರು ಆಯುಕ್ತರಿಗೆ ಸಲ್ಲಿಸಿದ ಪ್ರಸ್ತಾವನೆಯಲ್ಲಿ ಅಥಣಿ ತಾಲ್ಲೂಕಿನ ಪಾಂಡೇಗಾಂವ ಗ್ರಾಮವು ಪಶುಚಿಕಿತ್ಸಾಲಯ ಖಿಳೇಗಾಂವದಿಂದ ಕೇವಲ 2 ಕಿ.ಮೀ. ಅಂತರದಲ್ಲಿದ್ದು, ಮಾಂಡೇವಾಂವ ಸುತ್ತಮುತ್ತ ಯಾವುದೇ ಹಳ್ಳಿಗಳು ಇರುವುದಿಲ್ಲ

ಹಾಗೂ ಸದರಿ ಗ್ರಾಮದಲ್ಲಿ ಜಾನುವಾರು ಸಂಖ್ಯೆ ತೀರಾ ಕಡಿಮೆ ಇರುತ್ತದೆಂದು ತಿಳಿಸಿರುತ್ತಾರೆ. ಅಲ್ಲದೇ ನಾಗನೂರ ಪಿ.ಕೆ. ಗ್ರಾಮಕ್ಕೆ 8 ಕಿ.ಮೀ. ವ್ಯಾಪ್ತಿಯಲ್ಲಿ ಅವರಖೋಡ, ದೊಡ್ಡವಾಡ, ರಡ್ಡೇರಹಟ್ಟಿ ಮತ್ತು ನಾಗನೂರ ಗ್ರಾಮಗಳಿದ್ದು, ಅಲ್ಲಿ ಒಟ್ಟು 2192 ದನಗಳು, 5596 ಎಮ್ಮೆಗಳು, 125 ಕುರಿಗಳು ಮತ್ತು 1484 ಆಡುಗಳಿರುವುದರಿಂದ ಜಾನುವಾರು ಚಿಕಿತ್ಸೆಗೆ ಅನುಕೂಲವಾಗುವ ದೃಷ್ಟಿಯಲ್ಲಿ ಪ್ರಸ್ತುತ ಪಾಂಡೇಗಾಂವ ಗ್ರಾಮಕ್ಕೆ ಮಂಜೂರಾದ ಪಶುಚಿಕಿತ್ಸಾಲಯವನ್ನು ನಾಗನೂರ ಪಿ.ಕೆ. ಗ್ರಾಮಕ್ಕೆ ಸ್ಥಳಾಂತರಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ. ಈ ಬಗ್ಗೆ ಮಾನ್ಯ ಶಾಸಕರು, ಅಥಣಿ ವಿಧಾನಸಭಾ ಕ್ಷೇತ್ರ, ಬೆಳಗಾಂ ಜಿಲ್ಲೆ, ಇವರು ಶಿಫಾರಸ್ಸು ಮಾಡಿರುವುದಾಗಿಯೂ ಸಹ ತಿಳಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು, ಇವರು ಬೆಳಗಾವಿ ಜಿಲ್ಲಾ ಉಪನಿರ್ದೇಶಕರು ಅಥಣಿ ತಾಲ್ಲೂಕಿನ ಪಾಂಡೇಗಾಂವ ಗ್ರಾಮಕ್ಕೆ ಮಂಜೂರಾದ ಪಶುಚಿಕಿತ್ಸಾಲಯವನ್ನು ನಾಗನೂರ ಪಿ.ಕೆ. ಗ್ರಾಮಕ್ಕೆ ಸ್ಥಳಾಂತರಿಸಲು ಸ್ಪಷ್ಟ ಅಭಿಪ್ರಾಯ ನೀಡಿರುವುದರಿಂದ ಹಾಗೂ ಅಥಣಿಯ ಮಾನ್ಯ ಶಾಸಕರು ಈ ಬಗ್ಗೆ ಶಿಫಾರಸ್ಸು ಮಾಡಿರುವ ಹಿನ್ನೆಲೆಯಲ್ಲಿ, ಅಥಣಿ ತಾಲ್ಲೂಕಿನ ಪಾಂಡೇಗಾಂವ ಗ್ರಾಮಕ್ಕೆ ಮಂಜೂರಾದ ಪಶುಚಿಕಿತ್ಸಾಲಯವನ್ನು ನಾಗನೂರ ಪಿ.ಕೆ. ಗ್ರಾಮಕ್ಕೆ ಸ್ಥಳಾಂತರಿಸಲು ಆದೇಶ ಹೊರಡಿಸಬೇಕೆಂದು ಕೋರಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 86 ಪಸಸೇ 2008, ಬೆಂಗಳೂರು, ದಿನಾಂಕ: 15ನೇ ಜುಲೈ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಸರ್ಕಾರವು ಈ ಬಗ್ಗೆ ಕೂಲಂಕಷವಾಗಿ ಪರಿಶೀಲಿಸಿ, ಜಾನುವಾರುಗಳ ಚಿಕಿತ್ಸೆಗೆ ಮತ್ತು ರೈತಾಪಿ ವರ್ಗದವರಿಗೆ ಅನುಕೂಲವಾಗುವ ದೃಷ್ಟಿಯಿಂದ ಹಾಗೂ ನಾಗನೂರ ಪಿ.ಕೆ. ಗ್ರಾಮ ಕೃಷ್ಣಾನದಿ ತೀರದಲ್ಲಿದ್ದು ಸುತ್ತಮುತ್ತಲಿನ ಗ್ರಾಮಗಳಿಗೆ ಕೇಂದ್ರ ಸ್ಥಾನದಲ್ಲಿರುವುದನ್ನು ಪರಿಗಣಿಸಿ, ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 217 ಪಸಸೇ 2007, ದಿನಾಂಕ 31-8-2007ರನ್ವಯ ಅಥಣಿ ತಾಲ್ಲೂಕು ಪಾಂಡೇಗಾಂವ ಗ್ರಾಮಕ್ಕೆ ಮಂಜೂರಾದ ಪಶುಚಿಕಿತ್ಸಾಲಯವನ್ನು ಅದೇ ತಾಲ್ಲೂಕಿನ ನಾಗನೂರ ಪಿ.ಕೆ. ಗ್ರಾಮಕ್ಕೆ ಸ್ಥಳಾಂತರಿಸಲು ಅನುಮತಿ ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1080

**ಎಂ.ಪಿ. ನಾಗರಾಜ**

ಪೀಠಾಧಿಕಾರಿ-2,

ಪಶು ಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ

(ಪಶುಸಂಗೋಪನೆ-ಎ)

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** ಶ್ರೀ ವಿ.ಜೆ. ಆಲ್ಫೋನ್ಸಿಸ್, ಭೂವಿಜ್ಞಾನಿ, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇವರ ವಿರುದ್ಧ ಶಿಸ್ತಿನ ಕ್ರಮ ಜರುಗಿಸುವ ಕುರಿತು.

**ಓದಲಾಗಿದೆ:** 1. ದಿನಾಂಕ 14-2-2008ರ ಸರ್ಕಾರಿ ಆದೇಶ ಸಂಖ್ಯೆ: ಸಿಐ 144 ಎಂಎಂಎನ್ 2007.

2. ಶ್ರೀ ವಿ.ಜೆ. ಆಲ್ಫೋನ್ಸಿಸ್‌ರವರು ಪುನರ್ ಪರಿಶೀಲನಾ ಪ್ರಾಧಿಕಾರಕ್ಕೆ ಸಲ್ಲಿಸಿರುವ ದಿನಾಂಕ 9-4-2008ರ ಮನವಿ.

**ಪ್ರಸ್ತಾವನೆ :**

ಶ್ರೀ ವಿ.ಜೆ. ಆಲ್ಫೋನ್ಸಿಸ್, ಭೂವಿಜ್ಞಾನಿ, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಚಾಮರಾಜನಗರ ಜಿಲ್ಲೆ ಇವರು ಈ ಹಿಂದೆ ಉಪನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಚಾಮರಾಜನಗರ ಜಿಲ್ಲೆಯ ಹುದ್ದೆಯಲ್ಲಿ ಅಧಿಕ ಪ್ರಭಾರದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಂತಹ ಅವಧಿಯಲ್ಲಿ ಶ್ರೀ ಸಿದ್ದಲಿಂಗು ಇವರು ಕೊಳ್ಳೇಗಾಲ ತಾಲ್ಲೂಕಿನ, ಸರಗೂರು ಗ್ರಾಮದ ಕಾವೇರಿ ನದಿ ಪಾತ್ರದಲ್ಲಿ 10-00 ಎಕರೆ ಪ್ರದೇಶದಲ್ಲಿ ಹೊಂದಿದ್ದಂತಹ ಮರಳು ಗಣಿ ಗುತ್ತಿಗೆಯ ಸಂಬಂಧ, ದಿನಾಂಕ 8-2-2006ರಂದು ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇವರಿಗೆ ಪ್ರಸ್ತಾವನೆಯನ್ನು ಸಲ್ಲಿಸುವ ಸಂದರ್ಭದಲ್ಲಿ ಸರ್ಕಾರದಿಂದ ಹೊರಡಿಸದೇ ಇದ್ದಂತಹ ಸರ್ಕಾರಿ ಆದೇಶ ಸಂಖ್ಯೆ: ಸಿಐ 5 ಎಂಎಂಎನ್ 2005 (ಭಾಗ) ದಿನಾಂಕ 29-6-05ರನ್ನು ದೃಢೀಕರಿಸಿ ನೀಡಿದ್ದ ನಿಮ್ಮ ವರ್ತನೆಯನ್ನು ಕರ್ನಾಟಕ ನಾಗರೀಕ ಸೇವೆ (ನಡತೆ) ನಿಯಮಾವಳಿಗಳು 1966ರ ನಿಯಮ-3(1)(ii)ರ ಉಲ್ಲಂಘನೆಯೆಂದು ಪರಿಗಣಿಸಿ, ದಿನಾಂಕ 27-6-2007ರಂದು ಕಾರಣ ಕೇಳುವ ನೋಟೀಸ್‌ನ್ನು ಜಾರಿ ಮಾಡಿದ್ದು, ಅಧಿಕಾರಿಯು ದಿನಾಂಕ 16-10-07ರ ಮನವಿಯಲ್ಲಿ ನೀಡಿದ್ದ ಉತ್ತರವು ಸಮಂಜಸವಾಗಿಲ್ಲವೆಂದು ನಿರ್ಧರಿಸಿ, ಶ್ರೀ ವಿ.ಜೆ. ಆಲ್ಫೋನ್ಸಿಸ್, ಭೂವಿಜ್ಞಾನಿ, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಚಾಮರಾಜನಗರ ಜಿಲ್ಲೆ ಇವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 8(ii)ರ ಪ್ರಕಾರ ಮುಂದಿನ ಒಂದು

ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ರಹಿತವಗಿ ತಡೆಹಿಡಿಯುವ ದಂಡನೆಯನ್ನು ವಿಧಿಸಿ, ಮೇಲೆ (1)ರಲ್ಲಿ ಓದಲಾದ ದಿನಾಂಕ 14–2–2008ರ ಆದೇಶವನ್ನು ಸರ್ಕಾರವು ಹೊರಡಿಸಿರುತ್ತದೆ.

ಮೇಲೆ (1)ರಲ್ಲಿ ಓದಲಾದ ದಿನಾಂಕ 14–2–2008ರ ಆದೇಶದಲ್ಲಿ ವಿಧಿಸಿರುವ ದಂಡನೆಯು, ಲಘು ದಂಡನೆಯಾಗಿದ್ದರೂ ಸಹ ತನ್ನ ಪ್ರಕರಣದಲ್ಲಿ ಕಠಿಣ ದಂಡನೆಯ ಸ್ವರೂಪವನ್ನು ಪಡೆದಿದೆಯೆಂದೂ, ತಾವು ದಿನಾಂಕ 31–7–08ರಂದು ವಯೋನಿವೃತ್ತಿ ಹೊಂದಲಿದ್ದು, ಈ ದಂಡನೆಯು ತನ್ನ ಸೇವಾವಧಿಯಲ್ಲಿ ಪಡೆಯಬಹುದಾದ ಒಂದೇ ಒಂದು ಮುಂಬಡ್ತಿಯಿಂದ ತನ್ನನ್ನು ವಂಚಿತನನ್ನಾಗಿ ಮಾಡುತ್ತಿದೆಯೆಂದು ಭಿನ್ನವಿಸಿಕೊಳ್ಳುತ್ತಾ, ಈ ಕ್ರಿಯೆಯಿಂದಾಗಿ ಸರ್ಕಾರಕ್ಕೆ ಆರ್ಥಿಕ ನಷ್ಟವಾಗಲೀ ಅಥವಾ ಬೇರೆ ಯಾವುದೇ ರೀತಿಯ ನಷ್ಟವಾಗಲೀ ಸಂಭವಿಸಿಲ್ಲವಾದ್ದರಿಂದ ಹಾಗೂ ತನ್ನ ತಪ್ಪನ್ನು, ಅಚಾತುರ್ಯದಿಂದ ನಡೆದ ತಪ್ಪು ಎಂದು ಅಧಿಕಾರಿಯು ಒಪ್ಪಿಕೊಂಡು ಕ್ಷಮೆ ಕೋರುತ್ತಾ, ಮೇಲೆ (1)ರಲ್ಲಿ ಓದಲಾದ ದಿನಾಂಕ 14–2–2008ರ ಆದೇಶ ಸಂಖ್ಯೆ ಸಿಐ 144 ಎಂಎಂಎನ್ 2007ರಲ್ಲಿ ವಿಧಿಸಿರುವ ದಂಡನೆಯನ್ನು ಹಿಂದಕ್ಕೆ ಪಡೆಯುವಂತೆ ಮನವಿ ಮಾಡಿಕೊಂಡಿರುತ್ತಾರೆ. ಅಂತೆಯೇ, ಈ ಪ್ರಕರಣವನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 26ರನ್ವಯ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ:

**ಸರ್ಕಾರದ ಆದೇಶ ಸಂಖ್ಯೆ: ಸಿಐ 144 ಎಂಎಂಎನ್ 2007, ಬೆಂಗಳೂರು, ದಿನಾಂಕ: 14ನೇ ಜುಲೈ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಮೇರೆಗೆ, ಶ್ರೀ ವಿ.ಜೆ. ಆಲ್ಫೋನ್ಸಿಸ್, ಭೂವಿಜ್ಞಾನಿ, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಚಾಮರಾಜನಗರ ಜಿಲ್ಲೆ ಇವರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ರಹಿತವಾಗಿ ತಡೆಹಿಡಿಯುವ ದಂಡನೆಯನ್ನು ವಿಧಿಸಿ ಹೊರಡಿಸಿದ್ದ ದಿನಾಂಕ 14–2–08ರ ಆದೇಶ ಸಂಖ್ಯೆ ಸಿಐ 144 ಎಂಎಂಎನ್ 2007ನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಿಂಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1078

**ಎ.ಪಿ. ರಾಮಕೃಷ್ಣ**
ಪೀಠಾಧಿಕಾರಿ (ಗಣಿ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ**

**ವಿಷಯ :** ರಾಜ್ಯದ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯ ಪಶುಚಿಕಿತ್ಸಾಲಯ/ ಪಶು ಆಸ್ಪತ್ರೆಗಳಲ್ಲಿ ಖಾಲಿ ಇರುವ 100 ಪಶುವೈದ್ಯಾಧಿಕಾರಿಗಳ ಹುದ್ದೆಗಳನ್ನು ಗುತ್ತಿಗೆ ಆಧಾರದ ಮೇಲೆ ಮರು ನೇಮಕಾತಿ ಮಾಡುವ ಕುರಿತು.

**ಓದಲಾಗಿದೆ:** ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು, ಇವರ ಪ್ರಸ್ತಾವನೆ ಸಂಖ್ಯೆ ಆಪಸಂ/ಅಅಶ/ವಿವ/ನಿವೃತ್ತಿ ನೌ.ನೇ/2008–09.

**ಪ್ರಸ್ತಾವನೆ :**

ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿ ಪಶುವೈದ್ಯಾಧಿಕಾರಿ ಹಾಗೂ ಸಹಾಯಕ ನಿರ್ದೇಶಕರ ಬಹಳಷ್ಟು ಹುದ್ದೆಗಳು ಖಾಲಿ ಇರಲು ಮುಖ್ಯ ಕಾರಣಗಳೆಂದರೆ, ಬಹಳಷ್ಟು ಅಧಿಕಾರಿಗಳು ಸೇವೆಯಿಂದ ನಿವೃತ್ತರಾಗುತ್ತಿರುವುದು ಹಾಗೂ ಪರಿಣಿತ ಪಶುವೈದ್ಯಾಧಿಕಾರಿಗಳು ಖಾಸಗಿ ಸೇವೆಗೆ ಸೇರುತ್ತಿರುವುದು ಅಥವಾ ಬೀದರ್‌ನಲ್ಲಿ ಹೊಸದಾಗಿ ಪಶುವೈದ್ಯಕೀಯ ವಿಶ್ವವಿದ್ಯಾಲಯಕ್ಕೆ ಶೈಕ್ಷಣಿಕ ಸೇವೆಗೆ ಸೇರ್ಪಡೆ ಹೊಂದುತ್ತಿರುವುದು. ಮುಂದುವರೆದು, ಇಲಾಖೆಯಲ್ಲಿ ಹುದ್ದೆಗಳನ್ನು ಭರ್ತಿ ಮಾಡದಿರಲು ಕಾರಣ ಪ್ರಸ್ತುತ ಕರ್ನಾಟಕದಲ್ಲಿ ಕೇವಲ ಪ್ರತಿ ವರ್ಷ 130 ಅಭ್ಯರ್ಥಿಗಳು ಪಶುವೈದ್ಯ ಪದವೀಧರರಾಗಿ ಹೊರಬರುತ್ತಿದ್ದಾರೆ. ಪ್ರಸ್ತುತ ಖಾಲಿ ಇರುವ 1000 ಹುದ್ದೆಗಳ ಸಮಸ್ಯೆಯನ್ನು ಇನ್ನೂ 5–10 ವರ್ಷಗಳಲ್ಲಿ ಬಗೆಹರಿಸಬಹುದಾಗಿದೆ.

2. ಕರ್ನಾಟಕ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ (ವೃಂದ ಮತ್ತು ನೇಮಕಾತಿ) ನಿಯಮಗಳು, 2000ದ ಪ್ರಕಾರ ಪಶುವೈದ್ಯಾಧಿಕಾರಿ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಮಾತ್ರ ಭರ್ತಿ ಮಾಡಲು ಅವಕಾಶ ಕಲ್ಪಿಸಿದೆ. ರಾಜ್ಯ ಸರ್ಕಾರವು 200 ಖಾಲಿ ಪಶುವೈದ್ಯಾಧಿಕಾರಿ ಹುದ್ದೆಗಳನ್ನು ತುಂಬಲು ಈಗಾಗಲೇ ನಿರ್ಣಯವನ್ನು ಕೈಗೊಂಡಿದ್ದು, ಅದರಂತೆ ಸದರಿ 200 ಹುದ್ದೆಗಳನ್ನು ಪ್ರಸ್ತುತ ಆರ್ಥಿಕ ವರ್ಷದಲ್ಲಿ ತುಂಬಲು ಕರ್ನಾಟಕ ಲೋಕಸೇವಾ ಆಯೋಗಕ್ಕೆ ದಿನಾಂಕ 17–11–2007ರಂದು ಕೋರಿಕೆಯನ್ನು ಸಲ್ಲಿಸಿದೆ. ಈ ಒಂದು ಕಾರ್ಯವು ಸಮಯಾವಕಾಶ ತೆಗೆದುಕೊಳ್ಳಲಿದೆ. ಇಲಾಖೆಯಲ್ಲಿ ಖಾಲಿ ಇರುವ 200 ಪಶುವೈದ್ಯಾಧಿಕಾರಿ ಹುದ್ದೆಗಳನ್ನು ತುಂಬಿದರೂ ಸಹ ಸುಮಾರು 600–800 ಪಶುವೈದ್ಯಾಧಿಕಾರಿಗಳ ಹುದೆಯು ಖಾಲಿ ಬೀಳಲಿದೆ.

3. ಇಲಾಖೆಯು ಕೆಲವೊಂದು ಪ್ರಮುಖ ಚಟುವಟಿಕೆಗಳನ್ನು ಕೈಗೆತ್ತಿಕೊಂಡಿದೆ. ಅವುಗಳೆಂದರೆ (i) ಪಶು ಆರೋಗ್ಯ ಮತ್ತು ಜಾನುವಾರುಗಳನ್ನು ವಿವಿಧ ಕಾಯಿಲೆಗಳಿಂದ ರಕ್ಷಿಸಲು ಚಿಕಿತ್ಸೆ ಹಾಗೂ ಚುಚ್ಚುಮದ್ದು ಹಾಕುವ ಸಲುವಾಗಿ ಹಮ್ಮಿಕೊಂಡ ಕಾರ್ಯಕ್ರಮಗಳು (ii) ಜಾನುವಾರು ಹಾಗೂ ಕುಕ್ಕುಟ ಕ್ಷೇತ್ರಕ್ಕೆ ಸಂಬಂಧಿಸಿದ ರೋಗಗಳನ್ನು ನಿಯಂತ್ರಿಸಲು ನೀತಿ ಮತ್ತು ಯೋಜನೆಗಳು (iii) ರಾಜ್ಯದ ಗಡಿ ಭಾಗಗಳಲ್ಲಿ ಜಾನುವಾರು ರೋಗದ ಉಸ್ತುವಾರಿ ಹಾಗೂ ಸರ್ವೇಕ್ಷಣಾ ಘಟಕಗಳನ್ನು ರಚಿಸುವುದು. ಇದೂ ಅಲ್ಲದೇ ಭಾರತ ಸರ್ಕಾರವು ರಾಷ್ಟ್ರೀಯ ಕೃಷಿ ವಿಕಾಸ ಯೋಜನೆ ಅಡಿಯಲ್ಲಿ ಮುಂದಿನ 4 ವರ್ಷಗಳಲ್ಲಿ ಇಲಾಖೆಯಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳಲು ಸುಮಾರು ರೂ. 150 ರೂ. 200 ಕೋಟಿಗಳನ್ನು ಬಿಡುಗಡೆ ಮಾಡಲಿದೆ.

4. ಈ ಸಮಸ್ಯೆಯನ್ನು ಬಗೆಹರಿಸಲು ಹಾಗೂ ಇಲಾಖೆಯು ಹಮ್ಮಿಕೊಂಡಿರುವ ಕಾರ್ಯಕ್ರಮಗಳ ಹಿನ್ನೆಲೆಯಲ್ಲಿ ಸಾರ್ವಜನಿಕ ಹಿತದೃಷ್ಟಿಯಿಂದ 100 ಪಶುವೈದ್ಯಾಧಿಕಾರಿ ಹುದ್ದೆಗಳನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ–15ರ ಪ್ರಕಾರ 65 ವರ್ಷ ವಯೋಮಿತಿಯೊಳಗಿನ ನಿವೃತ್ತಿ ಹೊಂದಿದ ಪಶುವೈದ್ಯರನ್ನು ಗುತ್ತಿಗೆ ಆಧಾರದ ಮೇಲೆ ತಿಂಗಳಿಗೆ ರೂ. 12,000 ಸಂಚಿತ ವೇತನ ಆದಾರದ ಮೇಲೆ 2 ವರ್ಷಗಳ ಅವಧಿಗೆ ನೇಮಿಸಿಕೊಳ್ಳಲು ಸರ್ಕಾರ ತೀರ್ಮಾನಿಸಿದೆ. ಆದ್ದರಿಂದ, ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 116 ಪಸಸೇ 2008, ಬೆಂಗಳೂರು, ದಿನಾಂಕ: 11ನೇ ಜುಲೈ 2008.**

5. ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಸರ್ಕಾರವು 100 ಪಶುವೈದ್ಯಾದಿಕಾರಿ ಹುದ್ದೆಗಳನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ–15ರ ಪ್ರಕಾರ 65 ವರ್ಷ ವಯೋಮಿತಿಯೊಳಗಿನ ನಿವೃತ್ತಿ ಹೊಂದಿದ ಪಶುವೈದ್ಯರನ್ನು ಗುತ್ತಿಗೆ ಆಧಾರದ ಮೇಲೆ ತಿಂಗಳಿಗೆ ರೂ. 12,000–00 (ರೂಪಾಯಿ ಹನ್ನೆರಡು ಸಾವಿರ ಮಾತ್ರ) ಸಂಚಿತ ವೇತನ ಆಧಾರದ ಮೇಲೆ 2 ವರ್ಷಗಳ ಅವಧಿಗೆ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿನ ಷರತ್ತಿಗೊಳಪಟ್ಟು ನೇಮಿಸಿಕೊಳ್ಳಲು ಆದೇಶಿಸಿದೆ.

6. ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು, ಇವರು ಈ ಬಗ್ಗೆ ಅಧಿಕೃತ ರಾಜ್ಯಪತ್ರ, ದಿನಪತ್ರಿಕೆ ಹಾಗೂ ಸಮೂಹ ಮಾಧ್ಯಮಗಳಲ್ಲಿ ಪ್ರಕಟಣೆ ನೀಡುವಂತೆಯೂ ಸಹ ಸೂಚಿಸಿದೆ.

7. ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 192 ವೆಚ್ಚ–4/08, ದಿನಾಂಕ 17–5–2008ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ನಾಗರಾಜ**

ಪೀಠಾಧಿಕಾರಿ–2,

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ

(ಪಶುಸಂಗೋಪನೆ–ಎ)

**ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 116 ಪಸಸೇ 2008, ಬೆಂಗಳೂರು, ದಿನಾಂಕ: 11ನೇ ಜುಲೈ 2008ಕ್ಕೆ ಅನುಬಂಧ**

1) ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿ ನಿವೃತ್ತ ಪಶುವೈದ್ಯಾಧಿಕಾರಿಗಳನ್ನು ಪಶುವೈದ್ಯಾಧಿಕಾರಿಗಳ ಹುದ್ದೆಯಲ್ಲಿ ಗುತ್ತಿಗೆ ಮೇಲೆ ನೇಮಕಗೊಂಡಿರುವ ಡಾ: .............................. ರವರ ಗುತ್ತಿಗೆ ನೇಮಕಾತಿ ಎರಡು ವರ್ಷ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ ಇವರೆಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮಾತ್ರ ಇದ್ದು, ಇದೊಂದು ತಾತ್ಕಾಲಿಕ ನೇಮಕಾತಿ ಆಗಿರುತ್ತದೆ.
2) ಡಾ: .................................... ರವರು ಪಡೆಯುತ್ತಿರುವ ನಿವೃತ್ತಿ ವೇತನದೊಂದಿಗೆ ರೂ. 12,000–00 ಮರುನೇಮಕಾತಿ ವೇತನವನ್ನು ಪಡೆಯಲು ಅರ್ಹರಾಗಿರುತ್ತಾರೆ ಹಾಗೂ ಅವರು ಪಡೆಯುತ್ತಿರುವ ನಿವೃತ್ತಿ ವೇತನದ ಮೇಲೆ ತುಟ್ಟಿಭತ್ಯೆ ಮಾತ್ರ ಪಡೆಯಲು ಅರ್ಹರಿರುತ್ತಾರೆಯೇ ವಿನಃ ಬೇರೆ ಯಾವುದೇ ಭತ್ಯೆಗಳನ್ನು ಪಡೆಯುವಂತಿಲ್ಲ.
3) ಸದರಿ ಗುತ್ತಿಗೆ ನೌಕರರು ಸಾರ್ವಜನಿಕ ಹಿತದೃಷ್ಟಿಯಿಂದ ಪ್ರಯಾಣ ಮಾಡಲೇ ಬೇಕಾದಲ್ಲಿ ಮಾತ್ರ ಅವರು ನೇಮಕಾತಿ ಹೊಂದಿರುವ ಹುದ್ದೆಯ ಕಾಲಿಕ ವೇತನ ಶ್ರೇಣಿಯ ಕನಿಷ್ಠ ವೇತನದ ಮೇಲೆ ನಿಯಮಾನುಸಾರ ಲಭ್ಯವಿರುವ ಪ್ರಯಾಣ ಭತ್ಯೆ ಮತ್ತು ದಿನಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.

4) ಸದರಿ ಗುತ್ತಿಗೆ ಪಶುವೈದ್ಯಾಧಿಕಾರಿಗಳು ವಾಷಿಕ 15 ದಿನಗಳ ಸಾಂದರ್ಭಿಕ ರಜೆ ಮತ್ತು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 150ರ ಪ್ರಕಾರ ಗಳಿಕೆ ರಜೆ ಪಡೆಯಲು ಅರ್ಹರಾಗಿರುತ್ತಾರೆ.
5) ಒಪ್ಪಂದದ ಷರತ್ತು ಮತ್ತು ನಿಬಂಧನೆಗಳಲ್ಲಿ ನೀಡಿರುವ ಸೌಲಭ್ಯಗಳ ಹೊರತಾಗಿ ಬೇರಾವುದೇ ಸೌಲಭ್ಯಕ್ಕೆ ಅಂದರೆ ವೇತನಬಡ್ತಿ, ಪದೋನ್ನತಿ, ಪಿಂಚಣಿ ಇತ್ಯಾದಿ ಸೌಲಭ್ಯಗಳಿಗೆ ಸದರಿ ಗುತ್ತಿಗೆ ಪಶುವೈದ್ಯಾಧಿಕಾರಿಗಳು ಅರ್ಹರಾಗಿರುವುದಿಲ್ಲ.
6) ಸದರಿ ಗುತ್ತಿಗೆ ಪಶುವೈದ್ಯಾಧಿಕಾರಿಗಳು ಅವರ ದುರ್ವರ್ತನೆ, ನಿರ್ಲಕ್ಷತೆಯ ನಿಮಿತ್ತ ಸರ್ಕಾರಕ್ಕೆ ಸಂಭವಿಸಬಹುದಾದ ಎಲ್ಲಾ ನಷ್ಟಗಳನ್ನು ಸರ್ಕಾರಕ್ಕೆ ಭರಿಸಿಕೊಡಲು ಬದ್ಧರಾಗಿರತಕ್ಕದ್ದು.
7) ಸದರಿ ಮರುನೇಮಕಾತಿಯ ಅವಧಿಯ ಸೇವೆಯನ್ನು ನಿವೃತ್ತಿ ವೇತನ ಹಾಗೂ ಇತರ ಸೌಲಭ್ಯಗಳಿಗೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸುವುದಿಲ್ಲ.
8) ಅವರ ಕರ್ತವ್ಯ – ಜವಾಬ್ದಾರಿ ಹಾಗೂ ಅವರಿಗೆ ವಹಿಸಿರುವ ಕಾರ್ಯ – ಪ್ರಕಾರ್ಯಗಳನ್ನು ಶ್ರದ್ಧೆ, ಭಕ್ತಿ ಮತ್ತು ಆಸಕ್ತಿಯಿಂದ ನೆರವೇರಿಸುವುದು.
9) ಅವರು ಕರ್ತವ್ಯವನ್ನು ಪಾಲಿಸುತ್ತಿರುವಾಗ ಅಥವಾ ಕರ್ತವ್ಯ ನೆರವೇರಿಸುತ್ತಿರುವಾಗ ಅವರಿಗೆ ಲಭ್ಯವಾಗಬಹುದಾದ ಅಥವಾ ದೊರಕಬಹುದಾದ ಅಧಿಕೃತ ಮಾಹಿತಿಯನ್ನು ಗೌಪ್ಯವಾಗಿಟ್ಟು ಕಟ್ಟುನಿಟ್ಟಾಗಿ ಪಾಲಿಸಬೇಕು.
10) ಅವರು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ 1966 ಹಾಗೂ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ಕ್ಕೆ ಬದ್ಧರಾಗಿರತಕ್ಕದ್ದು.
11) ಈ ಒಪ್ಪಂದದ ಷರತ್ತುಗಳನ್ನು ಉಲ್ಲಂಘಿಸಿದಲ್ಲಿ ಗುತ್ತಿಗೆ ನೇಮಕಾತಿಯು ತಾನಾಗಿಯೇ ಮುಕ್ತಾಯವಾಗುತ್ತದೆ.
12) ಗುತ್ತಿಗೆ ಪಶುವೈದ್ಯಾದಿಕಾರಿಗಳು ದುರ್ನಡತೆಯಿಂದಾಗಲೀ ಅಥವಾ ನಿರ್ಲಕ್ಷಕ್ಕೆ ಉದಾಸೀನತೆಯಿಂದಾಗಲೀ ಸರ್ಕಾರಕ್ಕೆ ಸಂಬಂಧಿಸಿದಂತೆ ಆಗಲಿರುವ ಆರ್ಥಿಕ ನಷ್ಟವನ್ನು ಅವರು ಸರ್ಕಾರಕ್ಕೆ ತುಂಬಿಕೊಡಲು ಹೊಣೆಗಾರರಾಗಿರುತ್ತಾರೆ.
13) ಈ ಆದೇಶವನ್ನು ಸ್ವೀಕರಿಸಿದ ದಿನಾಂಕದಿಂದ ಏಳು ದಿನಗಳ ಒಳಗಾಗಿ ಐವತ್ತು (ರೂ. 50.00) ರೂಪಾಯಿಗಳ ಮೌಲ್ಯದ ಛಾಪಾ ಕಾಗದದಲ್ಲಿ ಸದರಿ ನೇಮಕಾತಿಯ ಷರತ್ತು ಮತ್ತು ನಿಬಂಧನೆಗಳನ್ನು ಒಳಗೊಂಡಿರುವ ಕರಾರು ಪತ್ರವನ್ನು ಕ್ರಮಬದ್ಧ ರೀತಿಯಲ್ಲಿ ಸದರಿ ಗುತ್ತಿಗೆ ಪಶುವೈದ್ಯಾಧಿಕಾರಿಗಳಿಂದ ಬರೆಸಿಕೊಳ್ಳತಕ್ಕದ್ದು.

**ಎಂ.ಪಿ. ನಾಗರಾಜ**

ಪಿ.ಆರ್. 1079

ಪೀಠಾಧಿಕಾರಿ–2,
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ
(ಪಶುಸಂಗೋಪನೆ–ಎ)

**PERSONNEL AND ADMINISTRATIVE REFORMS SECRETARIAT**

**No. DPAR 155 SAS 2008, Bangalore, dated 14th August 2008**

**CORRIGENDUM**

In the Government Order of even number dated 4-7-2008, in para 2 of portion for the words "the expenses towards course fee, boarding and lodging charges will be borne by DoPT, Government of India" shall be and shall always be read as "the expenses towards course fee, boarding and lodging charges shall be debited to the Head of Account "2070-00-003-4-01-015" under National Training Policy.

By order and in the name of the Governor of Karnataka,

PR. 1204

**K.G. ANANTHA**

Under Secretary to Government,
DP & AR (Services-I).